CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಡಿಸೆಂಬರ್ ೮, ೨೦೦೫ (ಮಾರ್ಗಶಿರ ೧೭, ಶಕವರ್ಷ ೧೯೨೭) | ಸಂಚಿಕೆ ೪೮ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮಡಿಕೇರಿ

**ಹರಾಜು ಪ್ರಕಟಣೆ ಸಂಖ್ಯೆ: ಕೈತಸಂಮ:ಖರೀದಿ:ಹರಾಜು:2004-05, ದಿನಾಂಕ: 23ನೇ ನವೆಂಬರ್, 2005**

ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮಡಿಕೇರಿಯ ಆವರಣದಲ್ಲಿ ದಿನಾಂಕ: 16.01.2006ರಂದು ಬೆಳಿಗ್ಗೆ 11:30 ಗಂಟೆಗೆ ಸಾರ್ವಜನಿಕರ ಸಮ್ಮುಖದಲ್ಲಿ ಕೆಳಕಾಣಿಸಿರುವ ಷರತ್ತು ಮತ್ತು ನಿಬಂಧನೆಗಳನ್ನೊಳಗೊಂಡು ನಿರುಪಯುಕ್ತ ವಸ್ತುಗಳನ್ನು ಹೇಗಿವೆಯೋ ಹಾಗೆಯೇ ಬಹಿರಂಗ ಹರಾಜು ಮಾಡಲಾಗುವುದು.

1) ಹರಾಜಿನಲ್ಲಿ ಭಾಗವಹಿಸುವವರು ದಿನಾಂಕ: 16.01.2006ರಂದು ಬೆಳಿಗ್ಗೆ 10:30 ಗಂಟೆಯೊಳಗೆ ಸಂಸ್ಥೆಯಲ್ಲಿ ಹಾಜರಿದ್ದು ರೂ.3000-00 ಗಳ ಮುಂಗಡ ಠೇವಣಿಯನ್ನು ನಗದು ರೂಪದಲ್ಲಿ ಪ್ರಾಚಾರ್ಯರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ಮಡಿಕೇರಿ, ಇವರಿಗೆ ಪಾವತಿಸಿ ಹೆಸರನ್ನು ನೊಂದಾಯಿಸಿ ಹರಾಜಿನಲ್ಲಿ ಭಾಗವಹಿಸಬಹುದು.
2) ಹರಾಜಿಗೆ ಇರಿಸಲಾಗಿರುವ ವಸ್ತುಗಳನ್ನು ಕಛೇರಿ ವೇಳೆಯಲ್ಲಿ ಬಂದು ವೀಕ್ಷಿಸಬಹುದು.
3) ಹರಾಜಿನಲ್ಲಿ ಯಶಸ್ವಿಯಾದ ಸವಾಲುದಾರರು, ಸವಾಲು ಮೊತ್ತದ ಶೇ.50ರಷ್ಟು (ಮುಂಗಡ ಠೇವಣಿ ಬಿಟ್ಟು) ಹಣವನ್ನು ನಗದು ರೂಪದಲ್ಲಿ ಸ್ಥಳದಲ್ಲಿಯೇ, ಸಂದಾಯ ಮಾಡುವುದು.
4) ಹರಾಜಿನ ದಿನದಂದು ಜಾರಿಯಲ್ಲಿರುವ ಸರ್ಕಾರಿ ನಿಯಮಗಳಂತೆ, ಸವಾಲು ಮೊತ್ತದ ಜೊತೆಗೆ ತೆರಿಗೆಗಳನ್ನು ಪಾವತಿಸಬೇಕಿರುತ್ತದೆ.
5) ಯಾವುದೇ ಕಾರಣ ನೀಡದೆ ಬಿಡ್ಡನ್ನು ಅನುಮೋದಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಪ್ರಾಚಾರ್ಯರು ಹೊಂದಿರುತ್ತಾರೆ.
6) ಸವಾಲುದಾರರು ಹರಾಜಿನ ನಂತರ ಬಿಡ್ಡಿನ ಸವಾಲಿಗೆ ಅನುಗುಣವಾಗಿ ಪೂರ್ತಿ ಹಣವನ್ನು ಪಾವತಿಸಿದ ನಂತರ ತಮ್ಮ ಸ್ವಂತ ಖರ್ಚಿನಲ್ಲಿ 07 ದಿನದ ಒಳಗೆ ಸದರಿ ವಸ್ತುಗಳನ್ನು ವಿಲೇವಾರಿ ಮಾಡಿಕೊಳ್ಳತಕ್ಕದ್ದು.
7) ಹೆಚ್ಚಿನ ವಿವರಗಳನ್ನು ಪ್ರಾಚಾರ್ಯರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮಡಿಕೇರಿ, ಇವರಿಂದ ಕಛೇರಿ ವೇಳೆಯಲ್ಲಿ ಬಂದು ಪಡೆಯಬಹುದಾಗಿದೆ. ದೂರವಾಣಿ ಸಂಖ್ಯೆ:08272, 228357.

ಪಿ.ಕೆ. ನಾಗರಾಜ
ಪಿ.ಆರ್. 651 ಪ್ರಾಚಾರ್ಯರು,
ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಮಡಿಕೇರಿ.

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

### ಟೆಂಡರ್ ಅಧಿಸೂಚನೆ

**ಸಂಖ್ಯೆ: ಸಿಆಸುಇ 194 ಡಿಇವಿ 2005, ಬೆಂಗಳೂರು, ದಿನಾಂಕ: 28ನೇ ನವೆಂಬರ್, 2005**

ಎಲ್ಲಾ ಸಚಿವರುಗಳ ಮತ್ತು ಸಚಿವಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಯದರ್ಶಿ ಮತ್ತು ಅದಕ್ಕಿಂತ ಮೇಲ್ಪಟ್ಟ ದರ್ಜೆಯ ಅಧಿಕಾರಿಗಳಿಗೆ ಮೊಬೈಲ್ ದೂರವಾಣಿ ಸಂಪರ್ಕವನ್ನು ಒದಗಿಸಲಾಗುತ್ತಿದೆ.

ಮೊಬೈಲ್ ದೂರವಾಣಿ ಸಂಪರ್ಕಕ್ಕೆ ಸಂಬಂಧಪಟ್ಟಂತೆ ಕರೆಗಳ ವೆಚ್ಚ, ಎಸ್.ಟಿ.ಡಿ. ಕರೆಗಳ ವೆಚ್ಚ, ಮತ್ತು ಇತರೆ ಶುಲ್ಕಗಳು ಕಡಿಮೆಯಾಗಿರುವುದರಿಂದ ಸಚಿವಾಲಯದಲ್ಲಿ ಮೊಬೈಲ್ ದೂರವಾಣಿಯ ಸಂಪರ್ಕದ ಅವಶ್ಯಕತೆ ಬಂದಾಗ ಅತ್ಯಂತ ಕಡಿಮೆ ಶುಲ್ಕ ವಿಧಿಸುವ ಸಂಸ್ಥೆಯ ಸಂಪರ್ಕವನ್ನು ನೀಡಲು ಉದ್ದೇಶಿಸಲಾಗಿದೆ. ಈ ಕಾರಣದಿಂದಾಗಿ ಮೊಬೈಲ್ ದೂರವಾಣಿ ಸಂಪರ್ಕ ಒದಗಿಸುವ ಅಧಿಕೃತ ಸಂಸ್ಥೆಗಳಿಂದ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಈ ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳು ಈ ಕೆಳಕಂಡಂತೆ ಇರುತ್ತವೆ:

1) ಮೊಹರು ಮಾಡಿರುವ ಟೆಂಡರ್ ಕವರಿನ ಮೇಲೆ "ಮೊಬೈಲ್ ದೂರವಾಣಿ ಸಂಪರ್ಕದ ಗುತ್ತಿಗೆ ಬಗ್ಗೆ" ಎಂದು ನಮೂದಿಸಿರತಕ್ಕದ್ದು.

2) ಈ ಕೆಳಗಿನ ವೆಚ್ಚ, ಮತ್ತಿತರ ಶುಲ್ಕಗಳ ಬಗ್ಗೆ ದರಪಟ್ಟಿಯನ್ನು ನೀಡತಕ್ಕದ್ದು:
   1. ಕ್ಲೋಸ್ಡ್ ಯೂಸರ್ ಗ್ರೂಪ್ ಶುಲ್ಕ.
   2. ಬಾಡಿಗೆ ವೆಚ್ಚ.
   3. ರೋಮಿಂಗ್ ಸೌಲಭ್ಯದ ಶುಲ್ಕ.
   4. ಸ್ಥಳೀಯ ಕರೆಗಳ ಶುಲ್ಕ.
   5. ಎಸ್.ಟಿ.ಡಿ. ಕರೆಗಳ ಶುಲ್ಕ.
   6. ಐ.ಎಸ್.ಡಿ. ಕರೆಗಳ ಶುಲ್ಕ.
   7. ವಿವರವಾದ ಬಿಲ್ಲಿನ ವೆಚ್ಚ.
   8. ಎಸ್.ಎಂ.ಎಸ್. ಸಂದೇಶಗಳ ಶುಲ್ಕ.

3) ಈ ಟೆಂಡರ್‌ನಲ್ಲಿ ಯಶಸ್ವಿಯಾದ ಸಂಸ್ಥೆಯು ಮೊಬೈಲ್ ದೂರವಾಣಿ ಸಂಪರ್ಕವನ್ನು (ಸಿಮ್ ಕಾರ್ಡ್) ಉಚಿತವಾಗಿ ಒದಗಿಸಬೇಕು ಹಾಗೂ ಎಲ್ಲಾ ಸಂಪರ್ಕಗಳು ಕ್ಲೋಸ್ಡ್ ಯೂಸರ್ ಗ್ರೂಪ್‌ಗೆ ಒಳಪಟ್ಟಿರಬೇಕು.

4) ಈ ಟೆಂಡರ್‌ನಲ್ಲಿ ಯಶಸ್ವಿಯಾದ ಸಂಸ್ಥೆಯು ಮೊಬೈಲ್ ದೂರವಾಣಿಗಳ ಮಾಸಿಕ ಬಿಲ್ಲಿನ ವೆಚ್ಚ ಪಾವತಿ ಮಾಡಲು ಕನಿಷ್ಠ 20 ದಿನಗಳ ಕಾಲಾವಧಿ ನೀಡಲು ಸಿದ್ಧರಿರಬೇಕು.

5) ಈ ಟೆಂಡರ್‌ನಲ್ಲಿ ಭಾಗವಹಿಸುವ ಸಂಸ್ಥೆಗಳು ರೂ.5,000-00 (ರೂಪಾಯಿ ಐದು ಸಾವಿರ ಮಾತ್ರ) ಠೇವಣಿ (ಇ.ಎಂ.ಡಿ.) ಬಗ್ಗೆ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ) ವಿಧಾನಸೌಧ, ಇವರಿಗೆ ಸಂಬೋಧಿಸಿ ಟೆಂಡರ್‌ನೊಂದಿಗೆ ಲಗತ್ತಿಸಿದ ಕಳುಹಿಸತಕ್ಕದ್ದು.

6) ಅರ್ಜಿಯೊಂದಿಗೆ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

7) ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಮೊತ್ತವನ್ನು ಭದ್ರತಾ ಠೇವಣಿಯಾಗಿ ಗುತ್ತಿಗೆ ಅವಧಿಯಲ್ಲಿ ಇಟ್ಟುಕೊಳ್ಳಲಾಗುವುದು. ಗುತ್ತಿಗೆ ಅವಧಿ ಮುಗಿದ ನಂತರ ಗುತ್ತಿಗೆದಾರರ ಮೇಲೆ ಯಾವುದೇ ದೂರುಗಳು ಇಲ್ಲದಿದ್ದಲ್ಲಿ, ಭದ್ರತಾ ಠೇವಣಿಯನ್ನು ಬಡ್ಡಿ ರಹಿತವಾಗಿ ಹಿಂದಿರುಗಿಸಲಾಗುವುದು.

8) ಅಯಶಸ್ವಿ ಟೆಂಡರ್‌ದಾರರ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.

9) ಟೆಂಡರ್‌ನಲ್ಲಿ ಅಂಶ-2ಕ್ಕೆ ಸಂಬಂಧಿಸಿದಂತೆ ನಮೂದಿಸಿರುವ ಶುಲ್ಕ/ ದರಗಳು ಟೆಂಡರ್ ಅನುಮೋದಿಸಿದ ದಿನಾಂಕದಿಂದ ಒಂದು ವರ್ಷದ ಕಾಲ ಯಾವುದೇ ಬದಲಾವಣೆ ಇಲ್ಲದೆ ಜಾರಿಯಲ್ಲಿರತಕ್ಕದ್ದು.

10) ಟೆಂಡರ್‌ನ್ನು ದಿನಾಂಕ: 15.12.2005ರ ಮಧ್ಯಾಹ್ನ 3.00 ಗಂಟೆಯೊಳಗಾಗಿ ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಯಕಾರಿ-1, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು. ನಿಗದಿತ ದಿನಾಂಕ ಮತ್ತು ವೇಳೆಯ ನಂತರ ಬರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

11) ಟೆಂಡರ್‌ಗಳನ್ನು ಸರ್ಕಾರದ ಉಪ ಕಾರ್ಯದರ್ಶಿ (ಕಾರ್ಯಕಾರಿ) ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, ಕೊಠಡಿ ಸಂಖ್ಯೆ:23, ನೆಲಮಹಡಿ, ವಿಧಾನಸೌಧ, ಬೆಂಗಳೂರು ಇವರ ಕೊಠಡಿಯಲ್ಲಿ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 15.12.2005ರ ಮಧ್ಯಾಹ್ನ 4.30 ಗಂಟೆಗೆ ತೆರೆಯಲಾಗುವುದು.

12) ಯಾವುದೇ ಕಾರಣಗಳನ್ನು ನೀಡದೇ, ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಅಂಗೀಕರಿಸುವ ಸಕ್ಷಮ ಪ್ರಾಧಿಕಾರವು ಕಾಯ್ದಿರಿಸಿಕೊಂಡಿದೆ. ಅದರ ತೀರ್ಮಾನವೇ ಅಂತಿಮವಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).

ಪಿ.ಆರ್. 655

## ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು

## ಟೆಂಡರ್ ಪ್ರಕಟಣೆ

### ಸಂಖ್ಯೆ: ಸಂಗ್ರಹ-2(2)48/ 2005-06, ಬೆಂಗಳೂರು, ದಿನಾಂಕ:23ನೇ ನವೆಂಬರ್, 2005

ಪೊಲೀಸ್ ಪ್ರಧಾನ ಕಛೇರಿಯಲ್ಲಿರುವ ಗಣಕ ಯಂತ್ರ ಮತ್ತು ಪ್ರಿಂಟರ್‌ಗಳ ವಾರ್ಷಿಕ ನಿರ್ವಹಣೆಯ ಬಗ್ಗೆ ಬಿಡಿಭಾಗಗಳೊಂದಿಗೆ (WITH SPARES)/ ಬಿಡಿಭಾಗಗಳನ್ನು ಹೊರತುಪಡಿಸಿ (WITHOUT SPARES) ಮೊಹರು ಮಾಡಿರುವ ದರಪಟ್ಟಿಗಳನ್ನು ಆಹ್ವಾನಿಸಲಾಗಿದೆ.

| ಕ್ರ.ಸಂ. | ಗಣಕ ಯಂತ್ರಗಳ ಮಾದರಿ | ಸಂಖ್ಯೆ |
|---|---|---|
| 1. | ಪೆಂಟಿಯಂ-2 | 33 |
| 2. | ಪೆಂಟಿಯಂ-3 | 20 |
| 3. | ಪೆಂಟಿಯಂ-4 | 73 |
| | **ಒಟ್ಟು** | **126** |

| ಕ್ರ.ಸಂ. | ಪ್ರಿಂಟರ್‌ಗಳ ಮಾದರಿ | ಸಂಖ್ಯೆ |
|---|---|---|
| 1. | ಡಾಟ್ ಮ್ಯಾಟ್ರಿಕ್ಸ್ ಪ್ರಿಂಟರ್ | 68 |
| 2. | ಹೆಚ್.ಪಿ.ಡೆಸ್ಕ್ ಜೆಟ್/ ಇಂಕ್ ಜೆಟ್ ಪ್ರಿಂಟರ್ | 11 |
| 3. | ಹೆಚ್.ಪಿ. ಲೇಸರ್ ಜೆಟ್ ಪ್ರಿಂಟರ್ | 27 |
| | **ಒಟ್ಟು** | **106** |

**ಸೂಚನೆ:** ತಯಾರಿಕಾ ಘಟಕ/ ರೆಪ್ಯೂಟೆಡ್ ಏಜೆಂಟ್ ಮತ್ತು ರೆಪ್ಯೂಟೆಡ್ ಕಂಪನಿಗಳಿಗೆ ಆದ್ಯತೆ ನೀಡಲಾಗುವುದು.

ಟೆಂಡರ್ ಅರ್ಜಿಗಳನ್ನು ದಿನಾಂಕ: 01.12.2005 ರಿಂದ 15.12.2005ರವರೆಗೆ ಕೆಲಸದ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ.200/-ಗಳನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್‌ನಲ್ಲಿ ಪಾವತಿಸಿದರೆ ತಿರಸ್ಕರಿಸಲಾಗುವುದು) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಲು ಇಚ್ಛಿಸುವವರು ರೂ.200/-ಗಳಿಗೆ ಡಿ.ಡಿ.ಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಸ್ವ ವಿಳಾಸ ಹೊಂದಿದ ಲಕೋಟೆಯ ಮೇಲೆ ರೂ.50/-ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಲು ಕೋರಿದೆ.

ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಶೇಕಡಾ 2ರಷ್ಟು ಇ.ಎಂ.ಡಿ.ಯನ್ನು ಪ್ರತಿ ಉಪಕರಣದ ಮೌಲ್ಯಕ್ಕೆ ಮುಂಗಡ ಠೇವಣಿಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿ.ಡಿ., ಸಂಸ್ಥೆಯ ಆರ್ಥಿಕ ಸ್ಥಾನಮಾನ ಮತ್ತು ಸಾಮರ್ಥ್ಯ ಪೂರ್ವಾರ್ಹತೆ, ಮಾರಾಟ ತೆರಿಗೆ, ಆದಾಯ ತೆರಿಗೆ ವಿವರಗಳು, ವಾರ್ಷಿಕ ವಹಿವಾಟು ಮತ್ತು ಇತರೆ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಮೊಹರು ಮಾಡಿದ ಕವರಿನಲ್ಲಿ ಈ ಕಛೇರಿಯ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಕೇಂದ್ರಸ್ಥಾನ-1) ರವರಿಗೆ ಹೆಸರಿಸಿ, **ದಿನಾಂಕ: 24.12.2005ರ ಸಂಜೆ 5.00 ಗಂಟೆಯೊಳಗೆ** ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ. ಮೊಹರು ಮಾಡಿದ ಲಕೋಟೆಯ ತುದಿಯಲ್ಲಿ **"ಪೊಲೀಸ್ ಪ್ರಧಾನ ಕಛೇರಿಯ ಗಣಕ ಯಂತ್ರ ಮತ್ತು ಪ್ರಿಂಟರ್‌ಗಳ ವಾರ್ಷಿಕ ನಿರ್ವಹಣೆಯ ಬಗ್ಗೆ"** ಅರ್ಜಿ ಎಂದು ನಮೂದಿಸಿರಬೇಕು ಹಾಗೂ ಲಕೋಟೆಯ ಸರಬರಾಜು ಮಾಡಲು ಬಯಸುವ ಸಂಸ್ಥೆಯ ವಿಳಾಸವನ್ನು ಒಳಗೊಂಡಿರಬೇಕು. ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 26.12.2005ರಂದು ಬೆಳಿಗ್ಗೆ 11.00 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ಟೆಂಡರ್‌ಗಳನ್ನು ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.

ವಾರ್ಷಿಕ ನಿರ್ವಹಣಾ ಮೌಲ್ಯಕ್ಕೆ ಇ.ಎಂ.ಡಿ.ಯನ್ನು ಡಿ.ಡಿ. ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ಟೆಂಡರ್‌ದಾರರು ಅಂಚೆ ಮೂಲಕ/ ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ/ ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಸಾರಾಸಗಟಾಗಿ / ಭಾಗಶಃ ಒಪ್ಪಿಕೊಳ್ಳುವ, ಹೆಚ್ಚು ಮತ್ತು ಕಡಿಮೆ ಮಾಡುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್,
ಜನರಲ್ ಆಫ್ ಪೊಲೀಸ್ ರವರ ಪರವಾಗಿ.

ಪಿ.ಆರ್. 656

## ರೇಷ್ಮೆ ಇಲಾಖೆ
## ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಕಛೇರಿ, ಬೆಂಗಳೂರು
## ಅಧಿಸೂಚನೆ
### ಸಂಖ್ಯೆ: ಸಿ1(6):ರೇನಿ:20: ಬ್ಯಾಕ್‌ಲಾಗ್:2001-02, ಬೆಂಗಳೂರು, ದಿನಾಂಕ:23ನೇ ನವೆಂಬರ್, 2005

ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಸಿ1(6): ರೇನಿ:20: ಬ್ಯಾಕ್‌ಲಾಗ್: 2001-02, ದಿನಾಂಕ:24.08.2005ರಲ್ಲಿ ರೇಷ್ಮೆ ಇಲಾಖೆಯಲ್ಲಿ ರೇಷ್ಮೆ ಪ್ರದರ್ಶಕರ ಬ್ಯಾಕ್‌ಲಾಗ್ 1 ಹುದ್ದೆಯನ್ನು ಭರ್ತಿ ಮಾಡುವ ಸಂಬಂಧ **ಪರಿಶಿಷ್ಟ ಜಾತಿಗೆ** ಸೇರಿದ ಮಾಜಿ ಸೈನಿಕ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಅರ್ಹ ಅಭ್ಯರ್ಥಿಗಳು ಅರ್ಜಿ ಸಲ್ಲಿಸದೆ ಇರುವುದರಿಂದ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ:97: ಸೇನೆನಿ:2002, ದಿನಾಂಕ:22.11.2002ರ ಸೂಚನೆಯಂತೆ ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಿಲ್ಲದಿರುವುದರಿಂದ ಆಯಾ ವರ್ಗಕ್ಕೆ ಸೇರಿದ ಇತರೆ ಅಭ್ಯರ್ಥಿಯನ್ನು ಆ ಹುದ್ದೆಗೆ ಕರ್ನಾಟಕ ರಾಜ್ಯ ನಾಗರೀಕ ಸೇವಾ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಮೀಸಲಿರಿಸಿದ ತುಂಬದೆ ಇರುವ ಖಾಲಿ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಮಗಳು 2001ರ ಅಡಿಯಲ್ಲಿ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಕೆಳಕಂಡಂತೆ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದೆ. ಈ ಆಯ್ಕೆ ಪಟ್ಟಿಯಿಂದ ಬಾಧಿತರಾಗುವ ಅಭ್ಯರ್ಥಿಗಳು ತಮ್ಮ ಆಕ್ಷೇಪಣೆಗಳನ್ನು ದಿನಾಂಕ: 30.12.2005ರೊಳಗಾಗಿ ಕೆಳ ಸಹಿದಾರರಿಗೆ ಸಲ್ಲಿಸಬಹುದೆಂದು ಸೂಚಿಸಲಾಗಿದೆ.

**ಮುಖ್ಯಪಟ್ಟಿ**

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ ಮತ್ತು ಶೇಕಡ ಅಂಕಗಳು | ಹುದ್ದೆಗಳ ಮೀಸಲಾತಿ ವರ್ಗೀಕರಣ |
|---|---|---|---|---|
| 1. | ಕೆ.ಎಸ್. ಇಂದಿರಾ ಬಿನ್ ಕೆ.ಸಾವಕಯ್ಯ, ನಂ.146, ಎಲ್‌ಐಜಿ, 2ನೇ ಹಂತ, 4ನೇ ಮುಖ್ಯ ರಸ್ತೆ, 8ನೇ ಕ್ರಾಸ್, ಕೆ.ಹೆಚ್.ಬಿ. ಕಾಲೋನಿ, ಬಸವೇಶ್ವರ ನಗರ, ಬೆಂಗಳೂರು. | 01.08.1968 | ಪಿ.ಯು.ಸಿ. 66.5 | ಇತರೆ |

**ಹೆಚ್ಚುವರಿಪಟ್ಟಿ**

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ ಮತ್ತು ಶೇಕಡ ಅಂಕಗಳು | ಹುದ್ದೆಗಳ ಮೀಸಲಾತಿ ವರ್ಗೀಕರಣ |
|---|---|---|---|---|
| 1. | ಮಚೀಂದರ ಬಿನ್ ಗ್ಯಾನೋಬಾ ಭೋಸಲೆ, ಮು:ರಕ್ಶಾಳ(ಕೆ), ಅಂಚೆ:ಠಾಣಾಕುಶನೂರು, ತಾ:ಔರಾದ್, ಜಿಲ್ಲೆ: ಬೀದರ್. | 10.06.1975 | ಪಿ.ಯು.ಸಿ. 63.66 | ಇತರೆ |

ಆಯ್ಕೆ ಪ್ರಾಧಿಕಾರ,
ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು
ಹಾಗೂ ರೇಷ್ಮೆ ನಿರ್ದೇಶಕರ ಪರವಾಗಿ.

ಪಿ.ಆರ್. 648

## ಕಾರ್ಯಪಾಲಕ ಅಭಿಯಂತರರು, ಪಿಡಬ್ಲ್ಯೂಡಿ ವಿಭಾಗ, ಚಿತ್ರದುರ್ಗ

## ದ್ವಿಲಕೋಟೆ ಪದ್ಧತಿ, ಟೆಂಡರ್ ಪ್ರಕಟಣೆ

**ಸಂಖ್ಯೆ:ಕಾಪಾಅ:ಲೋಇ:ಚಿ:ಜೆಇ-4:ನಬಾರ್ಡ್-11:ದ್ವಿ ಲಕೋಟೆ:2005-2006, ದಿನಾಂಕ:18ನೇ ನವೆಂಬರ್, 2005**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗಳಿಗೆ **ಐಟಂವಾರು** ಟೆಂಡರ್‌ಗಳನ್ನು ದ್ವಿಲಕೋಟೆ ಪದ್ಧತಿಯಲ್ಲಿ ದ್ವಿಪ್ರತಿಗಳಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ಮತ್ತು ಆ್ಯಕ್ಟ್ -2000ರ ಪ್ರಕಾರ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ. ಕಾಮಗಾರಿಯ ಟೆಂಡರ್ 2 ಲಕೋಟೆಗಳನ್ನು ಅಂದರೆ (1) ತಾಂತ್ರಿಕ ಬಿಡ್ ಮತ್ತು (2) ಆರ್ಥಿಕ ಬಿಡ್‌ಗಳನ್ನು ಒಳಗೊಂಡಿರುತ್ತದೆ.

1) ಗುತ್ತಿಗೆದಾರರು ತಾಂತ್ರಿಕ ಬಿಡ್‌ನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ತಾಂತ್ರಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

2) ಗುತ್ತಿಗೆದಾರರು ಆರ್ಥಿಕ ಬಿಡ್‌ನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಷೆಡ್ಯೂಲ್- 'ಬಿ' ನಲ್ಲಿ ದರಗಳನ್ನು ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ಆರ್ಥಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

ಮೇಲ್ಕಂಡ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎರಡನ್ನೂ ಇನ್ನೊಂದು ಲಕೋಟೆಯಲ್ಲಿ ಹಾಕಿ ಕಾಮಗಾರಿಯ ಹೆಸರು ಹಾಗೂ ಗುತ್ತಿಗೆದಾರರ ಪೂರ್ಣ ವಿಳಾಸ ನಮೂದಿಸಿ ಮೊಹರು ಮಾಡಿರುವ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರಿಂದ ಏಕಕಾಲಕ್ಕೆ ಅಧೀಕ್ಷಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವೃತ್ತ, ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಮತ್ತು ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ವಿಭಾಗ, ಚಿತ್ರದುರ್ಗ ಇವರ ಕಾರ್ಯಾಲಯದಲ್ಲಿ ಈ ಕೆಳಗೆ ನಮೂದಿಸಿದ ಕಾಮಗಾರಿಗಳ ಎದಿರು ಸೂಚಿಸಿರುವ ದಿನಾಂಕಗಳಂದು ಸಾಯಂಕಾಲ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರಿಂದ ನಮೂದಿಸಿರುವ ದಿನಾಂಕದಂದು ಅಥವಾ ಇತರೆ ಅನುಕೂಲಕರವಾದ ದಿನಾಂಕದಂದು ಟೆಂಡರುದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಗೆ ನಮೂದಿಸಿರುವ ದಿನಾಂಕಗಳು ಸಾರ್ವಜನಿಕ ರಜಾ ದಿನವಾದರೆ ಮಾರನೆಯ ಕೆಲಸದ ದಿನವೇ ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು.

ತಾಂತ್ರಿಕ ಬಿಡ್‌ನ್ನು ಮೊದಲು ತೆರೆಯಲಾಗುವುದು. ಗುತ್ತಿಗೆದಾರರು ಇದರಲ್ಲಿ ಒದಗಿಸಲಾದ ವಿವರಗಳನ್ನು ಪರಿಶೀಲಿಸಲಾಗುವುದು. ತೃಪ್ತಿಕರವಾದ ವಿವರಗಳನ್ನು ಸಲ್ಲಿಸಿದ ಗುತ್ತಿಗೆದಾರರ ತಾಂತ್ರಿಕ ಬಿಡ್‌ಗಳನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯಾದ ನಂತರ ಅರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ತೆರೆಯಲಾಗುವುದು. ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕವನ್ನು ಅರ್ಹ ಗುತ್ತಿಗೆದಾರರಿಗೆ ತಿಳಿಸಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅನರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್ ತೆರೆಯಲಾಗುವುದಿಲ್ಲ. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗೆ ಇಟ್ಟಿರುವ ಹಣ ರೂ. ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ರೂ.ಗಳಲ್ಲಿ | ಟೆಂಡರು ಫಾರಂಗಳ ಬೆಲೆ ರೂ. | ಗುತ್ತಿಗೆದಾರರ ದರ್ಜೆ | ಕಾಮಗಾರಿಯನ್ನು ಪೂರ್ಣಗೊಳಿಸಲು ನಿಗದಿಪಡಿಸಿರುವ ಅವಧಿ ಮಳೆಗಾಲ ಸೇರಿ | ಕಾಮಗಾರಿಯ ಸ್ವರೂಪ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಮೊಳಕಾಲ್ಮೂರು ತಾಲ್ಲೂಕಿನ ಘಟಪರ್ತಿಯಿಂದ ಆಂಧ್ರ ಗಡಿಯವರೆಗೆ ಮಾರ್ಗ ಭೋಗನಹಳ್ಳಿ, ದೇವರಹಳ್ಳಿ, ಬಂಡೆತಿಮ್ಲಾಪುರ ರಸ್ತೆಯ ಅಭಿವೃದ್ಧಿ. | 140.00 | 140000-00 | 10000-00 +ತೆರಿಗೆ | ಒಂದನೇ ದರ್ಜೆ | 12 (ಹನ್ನೆರಡು) ತಿಂಗಳು | ಡಬ್ಲ್ಯೂ.ಬಿ. ಎಂ. ಮತ್ತು ಮಿಕ್ಸ್‌ಸೀಲ್ |
| 2. | ಹೊಸದುರ್ಗ ತಾಲ್ಲೂಕಿನ ಹೆಚ್.ಎ. ರಸ್ತೆಯಿಂದ ಗರಗಕ್ಕೆ ಸೇರುವ ರಸ್ತೆ ಮಾರ್ಗ ಮಾಳಪ್ಪನಹಳ್ಳಿ, ತುಂಬಿನಕೆರೆ, ಯಾದಘಟ್ಟ ರಸ್ತೆಯ ಅಭಿವೃದ್ಧಿ. | 100.00 | 100000-00 | 10000-00 +ತೆರಿಗೆ | ಒಂದನೇ ದರ್ಜೆ | 12 (ಹನ್ನೆರಡು) ತಿಂಗಳು | ಡಬ್ಲ್ಯೂ.ಬಿ. ಎಂ. ಮತ್ತು ಮಿಕ್ಸ್‌ಸೀಲ್ |
| 3. | ಚಳ್ಳಕೆರೆ ತಾಲ್ಲೂಕಿನ ಚಳ್ಳಕೆರೆ-ಹಿರಿಯೂರು ಮಾರ್ಗ ಸೋಮಗುದ್ದು, ಸೊಂಡೆಕೆರೆ ರಸ್ತೆಯ ಆಯ್ದ ಭಾಗಗಳಲ್ಲಿ ಅಭಿವೃದ್ಧಿ. | 70.00 | 70000-00 | 8000-00 +ತೆರಿಗೆ | ಒಂದನೇ ದರ್ಜೆ | 12 (ಹನ್ನೆರಡು) ತಿಂಗಳು | ಡಬ್ಲ್ಯೂ.ಬಿ. ಎಂ. ಮತ್ತು ಮಿಕ್ಸ್‌ಸೀಲ್ |
| 4. | ಹೊಳಲ್ಕೆರೆ ತಾಲ್ಲೂಕಿನ ವಿಶ್ವನಾಥನಹಳ್ಳಿ-ಚಿಕ್ಕಜಾಜೂರು ಮಾರ್ಗ ಕಾಳಘಟ್ಟ, ಐನಹಳ್ಳಿ, ಕಡೂರು ರಸ್ತೆಯ ಅಭಿವೃದ್ಧಿ. | 65.00 | 65000-00 | 8000-00 +ತೆರಿಗೆ | ಒಂದನೇ ದರ್ಜೆ | 12 (ಹನ್ನೆರಡು) ತಿಂಗಳು | ಡಬ್ಲ್ಯೂ.ಬಿ. ಎಂ. ಮತ್ತು ಮಿಕ್ಸ್‌ಸೀಲ್ |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 5. | ಹಿರಿಯೂರು ತಾಲ್ಲೂಕಿನ ಕೂಡ್ಲಹಳ್ಳಿ- ಮಸ್ಕಲ್‌ಮಟ್ಟಿ ರಸ್ತೆಯ ಕೂಡ್ಲಹಳ್ಳಿ ಹತ್ತಿರ ವೇದಾವತಿ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ. | 120.00 | 120000-00 | 10000-00 +ತೆರಿಗೆ | ಒಂದನೇ ದರ್ಜೆ | 12 (ಹನ್ನೆರಡು) ತಿಂಗಳು | ಆರ್.ಸಿ.ಸಿ. ಡೆಕ್ ಸ್ಲಾಬ್ ಸೇತುವೆ. |

**ಟೆಂಡರ್ ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ:**

1. ಖಾಲಿ ಟೆಂಡರ್ ಫಾರಂಗಳಿಗೆ ಅರ್ಜಿ ಸಲ್ಲಿಸುವ ಕಡೆಯ ದಿನಾಂಕ: 22.12.2005 (ಕಛೇರಿ ಕೆಲಸದ ವೇಳೆಯಲ್ಲಿ)
2. ಖಾಲಿ ಟೆಂಡರ್ ಫಾರಂಗಳಿಗೆ ನೀಡುವ ದಿನಾಂಕ: 24.12.2005 ರಿಂದ 27.12.2005 ವರೆಗೆ (ಕಛೇರಿ ಕೆಲಸದ ವೇಳೆಯಲ್ಲಿ)
3. ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸುವ ಕಡೆಯ ದಿನಾಂಕ: 30.12.2005 ಸಂಜೆ 4.00 ಗಂಟೆಯವರೆಗೆ.
4. ಮೊಹರಾದ ಟೆಂಡರ್‌ಗಳನ್ನು ತೆರೆಯುವ ದಿನಾಂಕ: 31.12.2005 ಬೆಳಿಗ್ಗೆ 11.00 ಗಂಟೆಗೆ.

**ನಿಬಂಧನೆಗಳು:**

1) ಕಾಮಗಾರಿಗೆ ಅವಶ್ಯವಿರುವ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಮತ್ತು ಇಲಾಖಾವತಿಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ.
2) ಖಾಲಿ ಟೆಂಡರ್ ಫಾರಂ ವಿತರಿಸುವಾಗ ಗುತ್ತಿಗೆದಾರರ ನೊಂದಣಿ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸಿಕೊಳ್ಳತಕ್ಕದ್ದು.
3) ಸತತವಾಗಿ 3 ಬಾರಿ ಟೆಂಡರ್ ಫಾರಂ ಖರೀದಿಸಿ ಟೆಂಡರ್ ಹಾಕದೇ ಇರುವ ಗುತ್ತಿಗೆದಾರರು ಟೆಂಡರ್‌ಫಾರಂಗಾಗಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
4) ಕಾಮಗಾರಿಯನ್ನು ಉಪಗುತ್ತಿಗೆ ನೀಡುವುದನ್ನು ನಿಷೇಧಿಸಲಾಗಿದೆ.
5) ಗುತ್ತಿಗೆದಾರರು ಕಾರ್ಯಾದೇಶ ಪತ್ರ ಸ್ವೀಕರಿಸಿದ ಒಂದು ವಾರದೊಳಗೆ ಗುತ್ತಿಗೆ ಕರಾರು ಮಾಡಿಕೊಳ್ಳದಿದ್ದಲ್ಲಿ ಅಥವಾ ಗುತ್ತಿಗೆ ಕರಾರನ್ನು ಮಾಡಿಕೊಂಡ ನಂತರ ಒಂದು ವಾರದೊಳಗೆ ಕಾಮಗಾರಿಯನ್ನು ಪ್ರಾರಂಭಿಸದಿದ್ದಲ್ಲಿ ಹೊಣೆ ಮತ್ತು ಜವಾಬ್ದಾರಿ ಮೇಲೆ ಗುತ್ತಿಗೆಯನ್ನು ರದ್ದುಪಡಿಸಿ ಇ.ಎಂ.ಡಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
6) ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೆ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಲೋಕೋಪಯೋಗಿ ಇಲಾಖೆಗೆ ಸಂಬಂಧಿಸಿದ ಅಧಿಕಾರಿಗಳು ಕಾಯ್ದಿರಿಸಿಕೊಂಡಿರುತ್ತಾರೆ.
7) ಗುತ್ತಿಗೆದಾರರು ನಿರ್ವಹಿಸಿದ ಕಾಮಗಾರಿಯನ್ನು **ಎರಡು ವರ್ಷದವರೆಗೂ** ಸುಸ್ಥಿತಿಯಲ್ಲಿ ಅವರ ವೆಚ್ಚದಲ್ಲಿ ಕಾಪಾಡತಕ್ಕದ್ದು.
8) ಗುತ್ತಿಗೆದಾರರು ಟೆಂಡರ್ ಫಾರಂನಲ್ಲಿ ಎಲ್ಲಾ ಪುಟಗಳನ್ನು ಸರಿಯಾಗಿ ತುಂಬಿ ಸಹಿ ಮಾಡಿ ಸಲ್ಲಿಸತಕ್ಕದ್ದು ಮತ್ತು ಗುತ್ತಿಗೆದಾರರು ಇಲಾಖಾ ನಿಯಮಗಳಿಗೆ ಬದ್ಧರಾಗಿರಬೇಕು.
9) ಗುತ್ತಿಗೆದಾರರು ಹಿಂದಿನ ಐದು ವರ್ಷಗಳಲ್ಲಿ, ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ಮೇಲ್ಕಂಡ ಕಾಮಗಾರಿಗಳಲ್ಲಿ ತೆಗೆದುಕೊಳ್ಳಲು ಉದ್ದೇಶಿಸಿದ ಕಾಮಗಾರಿಗಳ ಒಟ್ಟು ಮೊತ್ತದ ಶೇಕಡ 30ಕ್ಕೆ ಕಡಿಮೆ ಇಲ್ಲದಂತೆ **ಅದೇ ತರಹದ ಒಂದು ಕಾಮಗಾರಿಯನ್ನು** ನಿರ್ವಹಿಸಿರುವ ಅನುಭವವುಳ್ಳವರಾಗಿರಬೇಕು. **ಇದಕ್ಕೆ ಸಂಬಂಧಿಸಿದಂತೆ ಅನುಭವದ ಪ್ರಮಾಣಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ಸ್ವರೂಪದ ವಿವರಗಳು ಇರತಕ್ಕದ್ದು.**
10) ಗುತ್ತಿಗೆದಾರರು ಈ ಹಿಂದೆ ಯಾವುದೇ ಕಾಮಗಾರಿಯನ್ನು ಪೂರ್ಣಗೊಳಿಸದೇ ಮಧ್ಯೆದಲ್ಲಿ ತೊರೆದಿರಬಾರದು, ಹಾಗೂ ಸಕಾರಣವಿಲ್ಲದೇ ಯಾವುದೇ ಕಾಮಗಾರಿಯನ್ನು ವಿಳಂಬವಾಗಿ ಪೂರೈಸಿರಬಾರದು.
11) ಗುತ್ತಿಗೆದಾರರು ಮೇಲ್ಕಂಡ ಕಾಮಗಾರಿಗಳಿಗೆ ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವ ಹೊಂದಿರಬೇಕು. ಈ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ದಾಖಲಾತಿಗಳನ್ನು ಅಂದರೆ ಸೇಲ್ ಡೀಡ್, ನೊಂದಣಿ ಪ್ರಮಾಣ ಪತ್ರ, ಡೆಲವರಿ ಇನ್‌ವಾಯ್ಸ್ ಇತ್ಯಾದಿಗಳನ್ನು **ತಾಂತ್ರಿಕ ಬಿಡ್‌ನೊಂದಿಗೆ** ಲಗತ್ತಿಸತಕ್ಕದ್ದು.

**ಅ) ರಸ್ತೆ ಕಾಮಗಾರಿಗಳಿಗೆ:**

1) ಟಿಪ್ಪರ್‌ಗಳು-4 ನಂ.
2) ಸ್ಟಾಟಿಕ್ ರೋಡ್ ರೋಲರ್ (8/10 ಟನ್ ಸಾಮರ್ಥ್ಯದ) -2 ನಂ.
3) ಮೆಕ್ಯಾನಿಕಲ್ ಸ್ಪ್ರೇಯರ್-1 ನಂ.
4) ರಸ್ತೆ ಕಾಮಗಾರಿಗೆ ಅವಶ್ಯಕವಾದ ಯಂತ್ರೋಪಕರಣಗಳನ್ನು ಹೊಂದಿರುವ ಬಗ್ಗೆ ವಿವರ ಸಲ್ಲಿಸತಕ್ಕದ್ದು.

ಗುತ್ತಿಗೆದಾರರು ರಸ್ತೆ ಕಾಮಗಾರಿಗೆ ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವ ಹೊಂದಿರಬೇಕು ಅಥವಾ ಬಾಡಿಗೆ ಆಧಾರದಲ್ಲಿ ತರುವವರು ಮಾಲೀಕರಿಂದ ಸೂಕ್ತ ಬಾಡಿಗೆ ಕರಾರು ಪತ್ರವನ್ನು ಮೇಲೆ 11ರಲ್ಲಿ ತಿಳಿಸಿರುವ ಎಲ್ಲಾ ಅವಶ್ಯಕ ದಾಖಲಾತಿಗಳೊಂದಿಗೆ ಹಾಗೂ ಮಾಲೀಕರು ಸದರಿ ಯಂತ್ರೋಪಕರಣಗಳನ್ನು ಸ್ವತಃ ಹೊಂದಿರುವ ಬಗ್ಗೆ ಅಗತ್ಯ ದಾಖಲಾತಿಗಳನ್ನು ಯಾವುದೇ ಸಂಸ್ಥೆಯಿಂದ ಆರ್ಥಿಕ ನೆರವು ಪಡೆದು ಖರೀದಿಸಿದ್ದಲ್ಲಿ, ಆ ಸಂಸ್ಥೆಗೆ ಸದರಿ ಯಂತ್ರೋಪಕರಣಗಳನ್ನು ಅಡ ಇಟ್ಟಿದಲ್ಲಿ, ಆ ಸಂಸ್ಥೆಯಿಂದ ಸೂಕ್ತ ಮುಚ್ಚಳಿಕೆ ಪತ್ರ ಪಡೆದು ಈ ಎಲ್ಲಾ ದಾಖಲಾತಿಗಳನ್ನು **ತಾಂತ್ರಿಕ ಬಿಡ್‌ನೊಂದಿಗೆ** ಸಲ್ಲಿಸತಕ್ಕದ್ದು. ಹಾಟ್ ಮಿಕ್ಸ್ ಪ್ಲಾಂಟ್ ಸ್ಥಾಪಿಸಿರುವ ಸ್ಥಾವರದ ಸ್ಥಳವನ್ನು ತಪ್ಪದೇ **ತಾಂತ್ರಿಕ ಬಿಡ್‌ನೊಂದಿಗೆ** ನಮೂದಿಸತಕ್ಕದ್ದು.

1. 20/30 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್‌ಮಿಕ್ಸ್ ಪ್ಲಾಂಟ್-1 ನಂ.
2. ಮೆಕ್ಯಾನಿಕಲ್ ಪೇವರ್ ಫಿನಿಷರ್-1 ನಂ.

**ಆ) ಸೇತುವೆ ಕಾಮಗಾರಿಗೆ:**

ಗುತ್ತಿಗೆದಾರರು ಸೇತುವೆ ಕಾಮಗಾರಿಗೆ ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವ ಹೊಂದಿರಬೇಕು. ಈ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ಸೂಕ್ತ ದಾಖಲಾತಿಗಳನ್ನು ಅಂದರೆ ಸೇಲ್ ಡೀಡ್, ನೊಂದಣಿ ಪ್ರಮಾಣ ಪತ್ರ, ಡೆಲವರಿ ಇನ್‌ವಾಯ್ಸ್ ಇತ್ಯಾದಿಗಳನ್ನು **ತಾಂತ್ರಿಕ ಬಿಡ್‌ನೊಂದಿಗೆ** ಲಗತ್ತಿಸತಕ್ಕದ್ದು.

1. ಟಿಪ್ಪರ್‌ಗಳು -2 ನಂ.
2. ಸ್ಟಾಟಿಕ್ ರೋಡ್ ರೋಲರ್ (8/10 ಟನ್ ಸಾಮರ್ಥ್ಯದ) -1 ನಂ.
3. ಎಕ್ಸ್‌ವೇಟರ್- 1 ನಂ.
4. ವೈಬ್ರೇಟರ್-4 ನಂ.
5. ಕಾಂಕ್ರೀಟ್ ಮಿಕ್ಸರ್ 5 ಹೆಚ್‌ಪಿ. ಡೀಸೆಲ್ ಇಂಜಿನ್‌ನೊಂದಿಗೆ-2 ನಂ.
6. ಸೆಂಟ್ರಿಂಗ್ ಸಾಮಗ್ರಿಗಳು ಕಾಮಗಾರಿಗೆ ಅವಶ್ಯವಿರುವಷ್ಟು.

**ಸೂಚನೆ:**

1. ಗುತ್ತಿಗೆದಾರರು ಸದರಿ ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳನ್ನು ನೋಟರಿ ಅಥವಾ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಿದ ದಾಖಲಾತಿ ಪ್ರತಿಗಳನ್ನು ಟೆಂಡರ್‌ನೊಂದಿಗೆ ಲಗತ್ತಿಸತಕ್ಕದ್ದು. ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳ ಮೂಲ ಪ್ರತಿಗಳನ್ನು ಗುತ್ತಿಗೆದಾರರು ಟೆಂಡರ್ ತೆರೆಯುವ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.
2. ತಾಂತ್ರಿಕ ಬಿಡ್‌ನಲ್ಲಿ ವಿವರಗಳನ್ನು ನಮೂದಿಸಲು ಸ್ಥಳಾವಕಾಶ ಕಡಿಮೆಯಾದಲ್ಲಿ ಹೆಚ್ಚುವರಿ ಪುಟಗಳನ್ನು ಬಳಸಬಹುದಾಗಿದೆ.

12. ಗುತ್ತಿಗೆದಾರರು **ಅರ್ಜಿಯೊಂದಿಗೆ** ಈ ಕೆಳಕಂಡ ದಾಖಲಾತಿಗಳನ್ನು ಕಾರ್ಯಪಾಲಕ ಅಭಿಯಂತರವರಿಗೆ ಸಲ್ಲಿಸತಕ್ಕದ್ದು, ಈ ಕೆಳಕಂಡ ಅವಶ್ಯಕ ದಾಖಲೆಗಳನ್ನು ಒದಗಿಸಿದ ಗುತ್ತಿಗೆದಾರರಿಗೆ ಮಾತ್ರ ಟೆಂಡರ್ ಷೆಡ್ಯೂಲ್‌ನ್ನು ನೀಡಲಾಗುವುದು. ಈ ಅವಶ್ಯಕ ದಾಖಲೆಗಳನ್ನು ತೃಪ್ತಿಕರವಾಗಿ ನೀಡದೇ ಇರುವಂತಹ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

1) ಗುತ್ತಿಗೆದಾರರು ಅರ್ಜಿಯೊಂದಿಗೆ ಟೆಂಡರ್ ಫಾರಂ ಶುಲ್ಕವನ್ನು (ಹಿಂದಿರುಗಿಸಲಾರದಂಥದ್ದು) ಪಾವತಿಸತಕ್ಕದ್ದು ಮತ್ತು ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರದ ಪ್ರತಿ ಲಗತ್ತಿಸತಕ್ಕದ್ದು.
2) ಅರ್ಜಿಯ ಜೊತೆಯಲ್ಲಿ ಮುಂಗಡ ಹಣ ಠೇವಣಿ (ಇ.ಎಂ.ಡಿ.) ಯನ್ನು ಷೆಡ್ಯೂಲ್ಡ್ ಬ್ಯಾಂಕ್‌ನ ಡಿಮ್ಯಾಂಡ್ ಡ್ರಾಫ್ಟ್/ ಡಿಪಾಜಿಟ್ ಕಾಲ್ ರಿಸೀಪ್ಟ್: ಬ್ಯಾಂಕ್ ಗ್ಯಾರಂಟಿ ಅಥವಾ ಕಾರ್ಯಪಾಲಕ ಅಭಿಯಂತರರು, ಪಿಡಬ್ಲ್ಯೂಡಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಿದ ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ಸಲ್ಲಿಸಬೇಕು. ಹಾಗೂ ಇದರ ವ್ಯಾಲಿಡಿಟಿ ಅವಧಿ ಟೆಂಡರ್ ತೆರೆದ ದಿನಾಂಕದಿಂದ 90 ದಿನಗಳ ಅವಧಿ ಒಳಗೊಂಡಿದ್ದು ಠೇವಣಿ ಕ್ರಮಬದ್ಧತೆ ಅದೇ ಅವಧಿಗೆ ಬೇಕಾಗಿರುತ್ತದೆ.
3) ಗುತ್ತಿಗೆದಾರರು ಮೌಲ್ಯ ವರ್ಧಿತ ತೆರಿಗೆ (ವ್ಯಾಟ್) ನೊಂದಣಿ ಪ್ರಮಾಣ ಪತ್ರವನ್ನು ಮತ್ತು ಹಿಂದಿನ ಸಾಲಿನ ಆದಾಯ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು ಸಂಬಂಧಿಸಿದ ಇಲಾಖೆಯಿಂದ ಪಡೆದು ಲಗತ್ತಿಸಬೇಕು.

ಹೆಚ್ಚಿನ ವಿವರಗಳಿಗೆ ಕಾರ್ಯಾಪಾಲಕ ಇಂಜಿನಿಯರ್, ಲೋಕೋಪಯೋಗಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯನ್ನು, ಕಛೇರಿ ಕೆಲಸದ ಸಮಯದಲ್ಲಿ ಸಂಪರ್ಕಿಸಬಹುದು.

ಕಾರ್ಯಪಾಲಕ ಅಭಿಯಂತರರು,
ಪಿ.ಆರ್. 649 ಪಿಡಬ್ಲ್ಯೂಡಿ ವಿಭಾಗ ಚಿತ್ರದುರ್ಗ.

## ಕಾರ್ಯನಿರ್ವಾಹಕ ಇಂಜಿನಿಯರ್ ಬಂದರು ಮತ್ತು ಮೀನುಗಾರಿಕಾ ವಿಭಾಗ, ಕಛೇರಿ ಉಡುಪಿ
## ಟೆಂಡರ್ ಪ್ರಕಟಣೆ
## ನಂ.ಕಾನಿಇಂ:ಬಂಮೀವಿ:ಎಇ:ಅಸೈಡ್ ಯೋಜನೆ ಕಾಮಗಾರಿ:ಟೆಂಡರ್ ಪ್ರಕಟಣೆ:987:2005-06, ದಿನಾಂಕ:28ನೇ ನವೆಂಬರ್, 2005
## ಎರಡು ಲಕೋಟೆ ಪದ್ಧತಿ

**ವಿಷಯ:** ಅಸೈಡ್ ಯೋಜನೆಯಡಿ ಮಂಗಳೂರು ಹಾಗೂ ಮಲ್ಪೆ ಮೀನುಗಾರಿಕೆ ಬಂದರಿನಲ್ಲಿ ನವೀಕರಣ ಮತ್ತು ಪುನರ್ ನಿರ್ಮಾಣ ಕಾಮಗಾರಿ.

ಕರ್ನಾಟಕ ಸರ್ಕಾರದ ಪರವಾಗಿ ಈ ಕೆಳಗೆ ನಮೂದಿಸಿದ ಕಾಮಗಾರಿಗಳನ್ನು ಕೈಗೊಳ್ಳಲು ನಿಗದಿತ ನಮೂನೆಯಲ್ಲಿ ಸೀಲು ಮಾಡಿದ ಎರಡು ಪ್ರತ್ಯೇಕ ಲಕೋಟೆಗಳಲ್ಲಿ "ಐಟಂ ರೇಟ್" ಟೆಂಡರುಗಳನ್ನು ಕರ್ನಾಟಕ ಸರ್ಕಾರದ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ 1ನೇ ದರ್ಜೆಯ ಮತ್ತು ಸಿ.ಪಿ.ಡಬ್ಲ್ಯೂ.ಡಿ. ಗುತ್ತಿಗೆದಾರರಿಂದ ಈ ಕೆಳಗೆ ಸಹಿ ಮಾಡಿದವರು ದ್ವಿಪ್ರತಿಯಲ್ಲಿ ಕರೆದಿರುತ್ತಾರೆ. ಭರ್ತಿ ಮಾಡಿದ ಟೆಂಡರುಗಳನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರುಗಳ ಕಛೇರಿಯಲ್ಲಿ **ದಿನಾಂಕ:02.02.2006ರಂದು ಸಂಜೆ 4.00 ಗಂಟೆಯವರೆಗೆ** ಸ್ವೀಕರಿಸಲಾಗುವುದು. ಹಾಗೂ ಸ್ವೀಕೃತವಾದ ಟೆಂಡರುಗಳನ್ನು ಸಾಧ್ಯವಾದಲ್ಲಿ ಅದೇ ದಿನ ತೆರೆಯಲಾಗುವುದು.

ನಿಬಂಧನೆಗಳೊಂದಿಗೆ ಸಲ್ಲಿಸಿದ ಟೆಂಡರುಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಮುಂಗಡ ಠೇವಣಿ ರೂ. ಲಕ್ಷಗಳಲ್ಲಿ | ಕಾಮಗಾರಿಯನ್ನು ಮುಗಿಸಲು ಕಾಲಾವಧಿ (ಮಳೆಗಾಲದ ಅವಧಿ ಹೊರತು ಪಡಿಸಿ) | ಖಾಲಿ ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) | ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ | ಖಾಲಿ ಟೆಂಡರ್ ಫಾರಂ ವಿತರಿಸುವ ದಿನಾಂಕ | ಭರ್ತಿ ಮಾಡಿದ ಟೆಂಡರು ಸಲ್ಲಿಸುವ ದಿನಾಂಕ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1. | ಅಸೈಡ್ ಯೋಜನೆಯಡಿ ಮಂಗಳೂರು ಮೀನುಗಾರಿಕಾ ಬಂದರಿನಲ್ಲಿ ಮೀನುಗಾರಿಕ ದಕ್ಕೆಯ ಮೊದಲನೇ ಹಂತದ ನವೀಕರಣ, ಅದಕ್ಕೆ ಹೊಂದಿಕೊಂಡ ರಸ್ತೆ ಮತ್ತು ಪಾರ್ಕಿಂಗ್ ಪ್ರದೇಶದ ಕಾಂಕ್ರೀಟಿಕರಣ, ಸುಲಭ ಶೌಚಾಲಯ ಸಂಕೀರ್ಣ ನಿರ್ಮಾಣ, ಸಂಪ್ ಟ್ಯಾಂಕ್ ನಿರ್ಮಾಣ ಇತ್ಯಾದಿ ಕಾಮಗಾರಿಗಳು. | ರೂ. 90.00 ಲಕ್ಷ | ರೂ. 0.90 ಲಕ್ಷ | 16 ತಿಂಗಳು | ರೂ.10000 +ತೆರಿಗೆ | 16.1.2006 | 25.1.2006 | 2.2.2006 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 2. | ಮಲ್ಪೆ ಮೀನುಗಾರಿಕಾ ಬಂದರಿನ 1ನೇ ಹಂತದಲ್ಲಿ ಹರಾಜು ಮಳಿಗೆ ಪ್ರಾಂಗಣದ ಪುನರ್ ನಿರ್ಮಾಣ ಮತ್ತು ಮೀನುಗಾರಿಕಾ ಗೇರ್ ಶೆಡ್ ನಿರ್ಮಾಣದ ಕಾಮಗಾರಿ. | ರೂ. 205.00 ಲಕ್ಷ | ರೂ. 2.05 ಲಕ್ಷ | 18 ತಿಂಗಳು | ರೂ. 20000 +ತೆರಿಗೆ | 16.1.2006 | 25.1.2006 | 2.2.2006 |

**ಷರತ್ತುಗಳು:**

ಪ್ರತಿಯೊಬ್ಬ ಅರ್ಜಿದಾರ ಗುತ್ತಿಗೆದಾರರು ಅರ್ಜಿಯೊಂದಿಗೆ ಈ ಕೆಳಕಂಡ ದಾಖಲೆಗಳನ್ನು ಅರ್ಜಿ ಸಲ್ಲಿಸುವ ಸಮಯದಲ್ಲೇ ಸಲ್ಲಿಸಬೇಕು, ಇಲ್ಲವಾದಲ್ಲಿ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.

1) ಲೋಕೋಪಯೋಗಿ ಇಲಾಖೆ ಅಥವಾ CPWDಯ 1ನೇ ದರ್ಜೆ ಗುತ್ತಿಗೆದಾರರ ನೋಂದಣಿ ಪತ್ರದ ದೃಢೀಕೃತ ಪ್ರತಿಯನ್ನು ಸಲ್ಲಿಸಬೇಕು.
2) ಕಾಮಗಾರಿ ಸಂಖ್ಯೆ (1)ಕ್ಕೆ ರೂ. 27.00 ಲಕ್ಷಗಳ ಮೊತ್ತಕ್ಕೆ ಹಾಗೂ ಕಾಮಗಾರಿ ಸಂಖ್ಯೆ(2)ಕ್ಕೆ ರೂ. 62.00 ಲಕ್ಷಗಳ ಮೊತ್ತಕ್ಕೆ ಕಡಿಮೆ ಇಲ್ಲದ ಒಂದಾದರೂ ಇದೇ ರೀತಿಯ **ಒಂದೇ ಬಿಲ್ಡಿಂಗ್ ಕಾಮಗಾರಿಯನ್ನು** ಕಳೆದ ಐದು ವರ್ಷಗಳಲ್ಲಿ ಯಶಸ್ವಿಯಾಗಿ ಮಾಡಿ ಮುಗಿಸಿದ ಬಗ್ಗೆ ಸಂಬಂಧಪಟ್ಟ ಕಾರ್ಯನಿರ್ವಾಹಕ ಇಂಜಿನಿಯರ್‌ರವರಿಂದ ಪ್ರಮಾಣ ಪತ್ರವನ್ನು ಸದ್ರಿ ಕಾಮಗಾರಿಯ ಕಾರ್ಯಾದೇಶ ಪತ್ರದೊಂದಿಗೆ ಸಲ್ಲಿಸತಕ್ಕದ್ದು. ಬಿಲ್ಡಿಂಗ್, ರೋಡ್ ಕಾಂಕ್ರೀಟ್ ಮತ್ತು ಟ್ರಸ' ವರ್ಕ್ ಮಾಡಿದ ಗುತ್ತಿಗೆದಾರರಿಗೆ ಹೆಚ್ಚಿನ ಆದ್ಯತೆ ನೀಡಲಾಗುವುದು.
3) ಈ ಕೆಳಕಂಡ ಯಂತ್ರೋಪಕರಣಗಳನ್ನು ಹೊಂದಿದ್ದು ಅದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಅರ್ಜಿ ಸಲ್ಲಿಸುವ ಸಮಯದಲ್ಲೇ ಸಲ್ಲಿಸಬೇಕು.

| ಕ್ರ.ಸಂ. | ಯಂತ್ರೋಪಕರಣಗಳು | ಸಂಖ್ಯೆ | ಲಗತ್ತಿಸಬೇಕಾದ ದಾಖಲೆಗಳ ವಿವರಗಳು |
|---|---|---|---|
| 1. | ಟಿಪ್ಪರ್ | 2 | ಖರೀದಿಸಿದ ಇನ್‌ವಾಯ್ಸ್ ಅಥವಾ ಯಂತ್ರೋಪಕರಣಗಳನ್ನು ಬಾಡಿಗೆ ಆಧಾರದಲ್ಲಿ ಒದಗಿಸುವವರ ಒಪ್ಪಿಗೆ ಪತ್ರವನ್ನು ರೂ.100/- ಡಾಕ್ಯೂಮೆಂಟ್‌ಪೇಪರ್‌ನಲ್ಲಿ ಯಂತ್ರೋಪಕರಣಗಳ ದಾಖಲೆಗಳೊಂದಿಗೆ ಒದಗಿಸುವುದು. |
| 2. | ಕಾಂಕ್ರೀಟ್ ಮಿಕ್ಸರ್ | 2 | -ಅದೇ- |
| 3. | ಕ್ರೇನ್ ಅಥವಾ ಎರೆಕ್ಷನ್ ಡೆರಿಕ್ | 1 | -ಅದೇ- |
| 4. | ಜನರೇಟರ್ ಮತ್ತು ವೆಲ್ಡಿಂಗ್ ಸೆಟ್ | 1 | -ಅದೇ- |
| 5. | ವೈಬ್ರೇಟರ್ | 2 | -ಅದೇ- |

4) ಪ್ರಕಟಣೆಯಲ್ಲಿ ಹೇಳಿದ ದಿನಾಂಕಗಳಲ್ಲಿ ಯಾವುದೇ ರಜಾ ದಿನವೆಂದು ಘೋಷಿಸಿದಲ್ಲಿ ಮುಂದಿನ ಕಛೇರಿಯ ಕೆಲಸದ ದಿನವನ್ನು ಪರಿಗಣಿಸುವುದು. ಯಾವುದೇ ಗುತ್ತಿಗೆದಾರರ ಅರ್ಜಿಯನ್ನು ಅಥವಾ ಟೆಂಡರನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿ ಕೊಳ್ಳಲಾಗಿದೆ.
5) ಕಾಮಗಾರಿಗೆ ಬೇಕಾದ ಸಿಮೆಂಟು, ಸ್ಟೀಲ್ ಹಾಗೂ ಇತರ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ತಮ್ಮ ಸ್ವಂತ ಖರ್ಚಿನಿಂದ ಪೂರೈಸಿ ಕೊಳ್ಳತಕ್ಕದ್ದು. ಹಾಗೂ ಸಾಮಗ್ರಿಗಳ ಗುಣಮಟ್ಟದ ಪ್ರಮಾಣ ಕಾಲಕಾಲಕ್ಕೆ ಸಲ್ಲಿಸಬೇಕು.
ಟೆಂಡರುಗಳನ್ನು ಕೆಳಕಂಡಂತೆ ಎರಡು ಪ್ರತ್ಯೇಕ ಲಕೋಟೆಗಳಲ್ಲಿ ಒಪ್ಪಿಸುವುದು.

**ಲಕೋಟೆ 1, ತಾಂತ್ರಿಕ ಬಿಡ್:**

1) ಕರ್ನಾಟಕ ಸರ್ಕಾರದ ಲೋಕೋಪಯೋಗಿ ಇಲಾಖೆ ಅಥವಾ CPWDಯ 1ನೇ ದರ್ಜೆ ಗುತ್ತಿಗೆದಾರರು ಗುತ್ತಿಗೆದಾರರ ನೋಂದಣಿ ಪತ್ರದ ದೃಢೀಕೃತ ಪ್ರತಿ.
2) ಕಾಮಗಾರಿ ಸಂಖ್ಯೆ (1)ಕ್ಕೆ ರೂ. 27.00 ಲಕ್ಷಗಳ ಮೊತ್ತಕ್ಕೆ ಹಾಗೂ ಕಾಮಗಾರಿ ಸಂಖ್ಯೆ (2)ಕ್ಕೆ ರೂ. 62.00 ಲಕ್ಷಗಳ ಮೊತ್ತಕ್ಕೆ ಕಡಿಮೆ ಇಲ್ಲದ ಒಂದಾದರೂ ಇದೇ ರೀತಿಯ **ಒಂದೇ ಬಿಲ್ಡಿಂಗ್ ಕಾಮಗಾರಿಯನ್ನು** ಕಳೆದ ಐದು ವರ್ಷಗಳಲ್ಲಿ ಯಶಸ್ವಿಯಾಗಿ ಮಾಡಿ ಮುಗಿಸಿದ ಬಗ್ಗೆ ಸಂಬಂಧಪಟ್ಟ ಕಾರ್ಯನಿರ್ವಾಹಕ ಇಂಜಿನಿಯರ್‌ರವರಿಂದ ಪ್ರಮಾಣ ಪತ್ರವನ್ನು ಸದ್ರಿ ಕಾಮಗಾರಿಯ ಕಾರ್ಯಾದೇಶ ಪತ್ರದೊಂದಿಗೆ ಸಲ್ಲಿಸತಕ್ಕದ್ದು. ಬಿಲ್ಡಿಂಗ್, ರೋಡ್ ಕಾಂಕ್ರೀಟ್ ಮತ್ತು ಟ್ರಸ' ವರ್ಕ್ ಮಾಡಿದ ಗುತ್ತಿಗೆದಾರರಿಗೆ ಮೊದಲ ಆದ್ಯತೆ ನೀಡಲಾಗುವುದು.
3) ಗುತ್ತಿಗೆದಾರರು ಈಗಾಗಲೇ ಅಂದರೆ 5 ವರ್ಷಗಳಲ್ಲಿ ವಹಿಸಿಕೊಂಡು ಮಾಡಿ ಮುಗಿಸಿದ ಮತ್ತು ಈಗ ಕೈಯಲ್ಲಿರುವ ಕಾಮಗಾರಿಗಳು.
4) ಗುತ್ತಿಗೆದಾರರು ಹೊಂದಿರುವ ಮೆಶಿನರಿ ಹಾಗೂ ವಾಹನಗಳ ದೃಢೀಕೃತ ಪಟ್ಟಿ.
5) ಗುತ್ತಿಗೆದಾರರು ಹೊಂದಿರುವ ತಾಂತ್ರಿಕ ಸಿಬ್ಬಂದಿಗಳ ವಿವರಗಳು ಅವರ ವಿದ್ಯಾರ್ಹತೆಗಳ ದೃಢೀಕೃತ ಪಟ್ಟಿ.
6) 3 ತಿಂಗಳ ಒಳಗೆ ಇರುವಂತೆ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ ಬ್ಯಾಂಕಿನಿಂದ ತಮ್ಮ ಆರ್ಥಿಕ ದೃಢತೆ ಬಗ್ಗೆ ಕಾಮಗಾರಿ ಸಂಖ್ಯೆ (1)ಕ್ಕೆ ರೂ.50.00 ಲಕ್ಷಗಳಿಗೆ, ಮತ್ತು ಕಾಮಗಾರಿ ಸಂಖ್ಯೆ (2)ಕ್ಕೆ ರೂ.100.00 ಲಕ್ಷಗಳಿಗೆ ಕಡಿಮೆ ಇಲ್ಲದ ಸಾಲ್ವೆನ್ಸಿ ಸರ್ಟಿಫಿಕೇಟ್.
7) ಇ.ಎಂ.ಡಿ. ಯನ್ನು ಡಿಮಾಂಡ್ ಡ್ರಾಫ್ಟ್ ಅಥವಾ ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಲಾದ ರಾಷ್ಟ್ರೀಯ ಉಳಿತಾಯ ಪತ್ರಗಳು ಅಥವಾ ಶೆಡ್ಯೂಲ್ಡ್ ಬ್ಯಾಂಕಿನ ಇಲ್ಲವೆ ರಾಷ್ಟ್ರೀಕೃತ ಬ್ಯಾಂಕಿನಿಂದ ಕೊಡ ಮಾಡಿದ ಬ್ಯಾಂಕರ್ಸ್ ಚೆಕ್, ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಮಾತ್ರ ಸಲ್ಲಿಸತಕ್ಕದ್ದು.
8) ಕಾಮಗಾರಿ ನಿರ್ವಹಿಸುವ ಬಗ್ಗೆ, ಹಣಕಾಸಿನ ವ್ಯವಸ್ಥೆಯ ಖಾತರಿ ಪತ್ರವನ್ನು ಕಾಮಗಾರಿ ಸಂಖ್ಯೆ (1)ಕ್ಕೆ 30.00 ಲಕ್ಷಗಳಿಗೆ ಮತ್ತು ಕಾಮಗಾರಿ ಸಂಖ್ಯೆ (2)ಕ್ಕೆ ರೂ.70.00 ಲಕ್ಷಗಳಿಗೆ ಕಡಿಮೆ ಇರದಂತೆ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಒದಗಿಸುವುದು.

**ಲಕೋಟೆ 2: (ಹಣಕಾಸಿನ ಸವಾಲು/ ಫೈನಾನ್ಸಿಯಲ್ ಬಿಡ್):**

ಈ ಲಕೋಟೆಯಲ್ಲಿ ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಕಛೇರಿಯಿಂದ ಕೊಡಲಾದ ಟೆಂಡರು ಪುಸ್ತಕಗಳಲ್ಲಿ ಗುತ್ತಿಗೆದಾರರು ರೇಟ್‌ಗಳನ್ನು ಅಂಕೆಗಳಲ್ಲಿ ಮತ್ತು ಅಕ್ಷರಗಳಲ್ಲಿ ನಮೂದಿಸಿ ಯಾವುದೇ ಬದಲಾವಣೆ ಮಾಡದೇ ಅಥವಾ ನಿಬಂಧನೆಗಳನ್ನು ಸೂಚಿಸದೆ ದ್ವಿಪ್ರತಿಗಳಲ್ಲಿ ಟೆಂಡರು ಪುಸ್ತಕಗಳನ್ನು ಸೀಲು ಮಾಡಿ ಸಲ್ಲಿಸತಕ್ಕದ್ದು.

ಲಕೋಟೆ (1) ಮತ್ತು ಲಕೋಟೆ (2) ಎಂದು ನಿಚ್ಚಳವಾಗಿ ಲಕೋಟೆಯ ಮೇಲೆ ಕೆಲಸದ ಹೆಸರಿನೊಂದಿಗೆ ಬರೆಯತಕ್ಕದ್ದು.

ಮೊದಲು ಲಕೋಟೆ (1)ನ್ನು ನಿರ್ಧಾರಿತ ದಿನದಂದು ಒಡೆದು ಗುತ್ತಿಗೆದಾರರ ಅರ್ಹತೆಯನ್ನು ನಿರ್ಧರಿಸಲಾಗುವುದು. ಅರ್ಹತೆಯುಳ್ಳ ಗುತ್ತಿಗೆದಾರರ ಲಕೋಟೆ (2)ನ್ನು ಮಾತ್ರ ನಂತರ ಸಂಬಂಧಿಸಿದ ಗುತ್ತಿಗೆದಾರರಿಗೆ ತಿಳಿಸಿ ಒಡೆಯಲಾಗುವುದು.

**ಸೂಚನೆ:**

1. ಹೆಚ್ಚಿನ ಮಾಹಿತಿಗಳು ಬೇಕಾದಲ್ಲಿ ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಬನ್ನಂಜೆ ಉಡುಪಿ ಇವರ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆದುಕೊಳ್ಳಬಹುದು.

**ಬಿ. ಗೋಪಾಲ ನಾಯಕ್**
ಕಾರ್ಯನಿರ್ವಾಹಕ ಇಂಜಿನಿಯರ್,
ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ.

ಪಿ.ಆರ್. 650

## ಪ್ರಾಚಾರ್ಯರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ತರೀಕೆರೆ-577228

## ಪ್ರಕಟಣೆ

### ಸಂಖ್ಯೆ: ಕೈತಸಂ/ತ/ ಖರೀದಿ/ ಸಿ.ಆರ್. -1/05-06, ದಿನಾಂಕ: 26ನೇ ನವೆಂಬರ್, 2005

ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ತರೀಕೆರೆ ಇಲ್ಲಿನ ಉಗ್ರಾಣದಲ್ಲಿರುವ ಈ ಕೆಳಗಿನ ನಿರುಪಯುಕ್ತ/ ಅನುಪಯುಕ್ತ ವಸ್ತುಗಳನ್ನು **ದಿನಾಂಕ: 28.12.2005ರಂದು** ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಹೆಚ್ಚಿನ ಮಾಹಿತಿಗಾಗಿ ಪ್ರಾಚಾರ್ಯರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಗುರುಭವನ, ಬಿ.ಹೆಚ್.ರಸ್ತೆ, ತರೀಕೆರೆ ಇವರನ್ನು ಸಂಪರ್ಕಿಸಲು ಸೂಚಿಸಲಾಗಿದೆ.

**ಸಾಮಗ್ರಿಗಳ ವಿವರ**

| | | |
|---|---|---|
| 1. | ಎಂ.ಎಸ್. ಸ್ಕ್ರ್ಯಾಪ್ | : ಅಂದಾಜು 700 ಕೆ.ಜಿ. |
| 2. | ಹ್ಯಾಂಡ್‌ಹ್ಯಾಕ್ಸ್ ಬ್ಲೇಡ್ | : ಅಂದಾಜು 25 ಕೆ.ಜಿ. |
| 3. | ಎಲೆಕ್ಟ್ರಿಕಲ್ ಅಲ್ಯುಮಿನಿಯಂ ಮತ್ತು ಕಾಪರ್ ವೈರ್ ಸ್ಕ್ರ್ಯಾಪ್ | : ಅಂದಾಜು 10 ಕೆ.ಜಿ. |

ತರೀಕೆರೆ:
ದಿನಾಂಕ:

ಪ್ರಾಚಾರ್ಯರು,
ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ತರೀಕೆರೆ-577228.

ಪಿ.ಆರ್. 653

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, (ಲಾಲ್‌ಬಾಗ್ ಸಸ್ಯತೋಟ) ಲಾಲ್‌ಬಾಗ್, ಬೆಂಗಳೂರು-4

## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

### ಸಂಖ್ಯೆ: ತೋಉನಿ:ಲಾಸತೋ:ಬಿಜಿಟಿವಿ1:85:2004-05, ಬೆಂಗಳೂರು, ದಿನಾಂಕ: 26ನೇ ನವೆಂಬರ್, 2005

ಲಾಲ್‌ಬಾಗ್ ಸಸ್ಯತೋಟದಲ್ಲಿನ ರಸ್ತೆಗಳು, ಕಾಲು ದಾರಿಗಳು, ಹುಲ್ಲುಹಾಸುಗಳು ಹಾಗೂ ಒಟ್ಟಾರೆ ಉದ್ಯಾನದಲ್ಲಿ ಪ್ರತಿನಿತ್ಯ ಕಸ ಕಡ್ಡಿ, ಮರದ ಎಲೆ, ಕಾಗದ, ಪ್ಲಾಸ್ಟಿಕ್ ಇತ್ಯಾದಿಯನ್ನು ಗುಡಿಸಿ ಕಾಂಪೋಸ್ಟ್ ಗುಂಡಿಗೆ ಸಾಗಿಸುವ ಮತ್ತು ಕಾಂಪೋಸ್ಟ್ ಗುಂಡಿಗೆ ಯೋಗ್ಯವಲ್ಲದ ತ್ಯಾಜ್ಯಗಳನ್ನು ಪ್ರತಿ ದಿನ ಹೊರ ಸಾಗಿಸುವುದು ಸೇರಿದಂತೆ ಸ್ವಚ್ಛತಾ ಕೆಲಸಗಳನ್ನು ಗುತ್ತಿಗೆ ಆಧಾರದ ಮೇಲೆ ನಿರ್ವಹಿಸಲು ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಸಂಕ್ಷಿಪ್ತ ಟೆಂಡರ್ ವಿವರಗಳು ಹಾಗೂ ನಿಬಂಧನೆಗಳನ್ನು ಈ ಕೆಳಗಿನಂತೆ ನಮೂದಿಸಲಾಗಿದೆ.

| | | |
|---|---|---|
| 1. | ಟೆಂಡರ್ ದಾಖಲಾತಿಗಳನ್ನು ವಿತರಿಸುವ ಅವಧಿ | 17.12.2005 ರಿಂದ 23.12.2005. |
| 2. | ಟೆಂಡರ್ ದಾಖಲಾತಿ/ ಬಿಡ್ಡು ದಾಖಲಾತಿಗಳನ್ನು ಈ ಕಛೇರಿಗೆ ಸಲ್ಲಿಸಲು ಕೊನೆಯ ದಿನಾಂಕ | 26.12.2005 ಮಧ್ಯಾಹ್ನ 3.00 ಗಂಟೆ. |
| 3. | ಟೆಂಡರ್ ನಮೂನೆ/ ಬಿಡ್ಡು ದಾಖಲಾತಿಗಾಗಿ ಪಾವತಿಸಬೇಕಾದ ಹಣ. | ರೂ.500/- |
| 4. | ತಾಂತ್ರಿಕ ಟೆಂಡರ್ ನಮೂನೆ ತೆರೆಯುವ ದಿನಾಂಕ | 27.12.2005 ಮಧ್ಯಾಹ್ನ 3.00 ಗಂಟೆ. |
| 5. | ಹಣ ಕಾಸಿನ ಟೆಂಡರ್ ನಮೂನೆ ತೆರೆಯುವ ದಿನಾಂಕ | 30.12.2005 ಮಧ್ಯಾಹ್ನ 3.00 ಗಂಟೆ. |
| 6. | ಸ್ವಚ್ಛತೆ ಕೆಲಸವನ್ನು ನಿರ್ವಹಿಸಬೇಕಾದ ಅವಧಿ | ಕಾರ್ಯಾದೇಶ ನೀಡಿದ ದಿನದಿಂದ ಎರಡು ವರ್ಷ. |

**ಟೆಂಡರ್ ಸಲ್ಲಿಸಲು ಗುತ್ತಿಗೆದಾರರು ಗಮನಿಸಬೇಕಾದ ಪ್ರಮುಖ ಸಂಕ್ಷಿಪ್ತ ವಿವರ ಹಾಗೂ ಷರತ್ತುಗಳು**

1) ಕಾರ್ಮಿಕ ಇಲಾಖೆಯಿಂದ ನಿಗದಿಪಡಿಸಿರುವ ಕನಿಷ್ಟ ಕೂಲಿ ದರಗಳಿಗೆ ಬದ್ದರಾಗಿಬೇಕು ಹಾಗೂ ಸದರಿ ಇಲಾಖೆಯಲ್ಲಿ ನೊಂದಣಿದಾರರಾಗಿರಬೇಕು.
2) ಸ್ವಚ್ಛತೆ ಕೆಲಸಕ್ಕೆ ನೇಮಿಸುವ ಕಾರ್ಮಿಕರಿಗೆ ಕಾರ್ಮಿಕ ಇಲಾಖೆ ನಿಯಮಾನುಸಾರ ಭವಿಷ್ಯ ನಿಧಿ, ರಾಜ್ಯ ವಿಮಾ ನಿಧಿ ಸೌಲಭ್ಯ (E.S.I.), ಆದಾಯ ತೆರಿಗೆ ಮತ್ತು ಕರ್ನಾಟಕ ಸೇವಾತೆರಿಗೆಗಳಿಗೆ ಬದ್ಧರಾಗಿರಬೇಕು. ಈ ಬಗ್ಗೆ ಸಂಬಂಧಪಟ್ಟ ಇಲಾಖೆಗಳಲ್ಲಿ ನೊಂದಣಿದಾರರಾಗಿರಬೇಕು.
3) ಟೆಂಡರ್ ಸಲ್ಲಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಕನಿಷ್ಟ 9 ಟನ್ ಸಾಮರ್ಥ್ಯದ ಟಿಪ್ಪರ್ ಮಾದರಿಯ ಲಾರಿ ವಾಹನದ ಮಾಲಿಕತ್ವ ಹೊಂದಿರಬೇಕು.
4) ಭದ್ರತಾ ಠೇವಣಿ ರೂ.1,00,000/- (E.M.D.) ಟೆಂಡರ್ ದಾಖಲೆ ಜೊತೆ ಲಗತ್ತಿಸಬೇಕು. ಟೆಂಡರ್ ಅನುಮೋದನೆಯಾದಲ್ಲಿ ದ್ವಿವಾರ್ಷಿಕ ಒಟ್ಟು ಟೆಂಡರ್ ಮೊತ್ತಕ್ಕೆ ಶೇ.10 ರಷ್ಟು ಬ್ಯಾಂಕ್ ಗ್ಯಾರಂಟಿಯನ್ನು ಸಲ್ಲಿಸಿ E.M.D. ಹಣ ವಾಪಸ್ ಪಡೆಯಬಹುದು.

ಹೆಚ್ಚಿನ ಮಾಹಿತಿಯನ್ನು ತೋಟಗಾರಿಕೆ ಉಪ ನಿರ್ದೇಶಕರು, ಲಾಲ್‌ಬಾಗ್ ಸಸ್ಯತೋಟ, ಲಾಲ್‌ಬಾಗ್‌ರವರನ್ನು ಖುದ್ದಾಗಿ ಸಂಪರ್ಕಿಸಿ ತಿಳಿಯಬಹುದಾಗಿದೆ.

ತೋಟಗಾರಿಕೆ ಉಪ ನಿರ್ದೇಶಕರು,
ಲಾಲ್‌ಬಾಗ್ ಸಸ್ಯತೋಟ.

ಪಿ.ಆರ್. 654

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು,**

**ಅಂಚೆ ಪೆಟ್ಟಿಗೆ ಸಂಖ್ಯೆ:7648, ಬೆಂಗಳೂರು-76**

**ಟೆಂಡರ್ ಪ್ರಕಟಣೆ**

**ಸಂಖ್ಯೆ:ತೋಇ: ಜೀವತಾ: ತೋಉನಿ:ಅಂಕ್ಕೃ:ಸತೋಅ-1:54:2005-06, ಬೆಂಗಳೂರು, ದಿನಾಂಕ:6ನೇ ಡಿಸೆಂಬರ್, 2005**

ಬಯೋಟೆಕ್ನಾಲಜಿ ಕೇಂದ್ರ ಹುಳಿಮಾವು, ಬೆಂಗಳೂರು–76 ಇಲ್ಲಿ ಸ್ಥಾಪಿಸಲಾಗಿರುವ ವಿವಿಧ ಪ್ರಯೋಗಶಾಲೆಗಳಿಗೆ ಸಂಬಂಧಪಟ್ಟಂತೆ ಯಂತ್ರೋಪಕರಣಗಳ ಹಾಗೂ ಬಯೋಟೆಕ್ನಾಲಜಿ ಕೇಂದ್ರದ ವಿದ್ಯುತ್ ವ್ಯವಸ್ಥೆಯ ವಾರ್ಷಿಕ ನಿರ್ವಹಣೆ, ವಿವಿಧ ಯಂತ್ರೋಪಕರಣಗಳು, ಗಾಜಿನ ಉಪಕರಣಗಳು, ಹಳೆಯ ತೋಟಗಾರಿಕೆ ಉಪಕರಣಗಳನ್ನು(ವಿಲೇವಾರಿ) ಮಾಡುವ ಬಗ್ಗೆ, ಬಯೋಟೆಕ್ನಾಲಜಿ ಕೇಂದ್ರದ ಭದ್ರತೆಗಾಗಿ ಗುತ್ತಿಗೆ ಆಧಾರದ ಮೇಲೆ ಭದ್ರತಾ ಸಿಬ್ಬಂಧಿಯನ್ನು ನೇಮಿಸುವ ಬಗ್ಗೆ, ಹಾಗೂ ವಿವಿಧ ತೋಟಗಾರಿಕಾ ಬೆಳೆಗಳ ಸಾಪ್ರದಾಯಿಕ ತಳಿಗಳ ಭೌಗೋಳಿಕ ಗುರುತಿಸುವಿಕೆ ಮತ್ತು ದಾಖಲಾತಿ ಮಾಡುವ ಬಗ್ಗೆ ವಿವಿಧ ಸಂಸ್ಥೆಗಳು, ಸರ್ಕಾರೇತರ ಸಂಸ್ಥೆಗಳು, ಗುತ್ತಿಗೆದಾರರು ಹಾಗೂ ಖರೀದಿದಾರರಿಂದ ಮೊಹರಾದ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಸದರಿ ಕಾರ್ಯಕ್ರಮಗಳಾದ ಯಂತ್ರೋಪಕರಣಗಳ ಹಾಗೂ ಬಯೋಟೆಕ್ನಾಲಜಿ ಕೇಂದ್ರದ ವಿದ್ಯುತ್ ವ್ಯವಸ್ಥೆಯ ವಾರ್ಷಿಕ ನಿರ್ವಹಣೆ, ವಿವಿಧ ಯಂತ್ರೋಪಕರಣಗಳು, ಗಾಜಿನ ಉಪಕರಣಗಳು, ಹಳೆಯ ತೋಟಗಾರಿಕೆ ಉಪಕರಣಗಳನ್ನು(ವಿಲೇವಾರಿ) ಮಾಡುವ ಬಗ್ಗೆ, ಬಯೋಟೆಕ್ನಾಲಜಿ ಕೇಂದ್ರದ ಭದ್ರತೆಗಾಗಿ ಗುತ್ತಿಗೆ ಆಧಾರದ ಮೇಲೆ ಭದ್ರತಾ ಸಿಬ್ಬಂಧಿಯನ್ನು ನೇಮಿಸುವ ಬಗ್ಗೆ, ಹಾಗೂ ಸಾಂಪ್ರದಾಯಿಕ ತೋಟಗಾರಿಕಾ ಬೆಳೆಗಳ ಭೌಗೋಳಿಕ ಗುರುತಿಸುವಿಕೆ ಮತ್ತು ದಾಖಲಾತಿ ಮಾಡುವ ಬಗ್ಗೆ ತಗಲುವ ವೆಚ್ಚವನ್ನು ಪ್ರತ್ಯೇಕ ಟೆಂಡರುಗಳಲ್ಲಿ ನಮೂದಿಸಬೇಕು. ಟೆಂಡರ್ ಫಾರಂಗಳು, ನಿಬಂಧನೆಗಳು ಮತ್ತು ಇತರೆ ಮಾಹಿತಿಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು–76 ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ದಿನಾಂಕ 09-01-2006 ರಿಂದ 19-01-2006 ರ ಒಳಗೆ ಪಡೆಯಬಹುದು.

ಟೆಂಡರ್ ಫಾರಂನ ಮೊತ್ತ ರೂ. 25/-. ಮೊಹರಾದ ಟೆಂಡರುಗಳ ಮೇಲೆ ಸದರಿ ಕಾರ್ಯಕ್ರಮಗಳಾದ **ಯಂತ್ರೋಪಕರಣಗಳ ಹಾಗೂ ಬಯೋಟೆಕ್ನಾಲಜಿ ಕೇಂದ್ರದ ವಿದ್ಯುತ್ ವ್ಯವಸ್ಥೆಯ ವಾರ್ಷಿಕ ನಿರ್ವಹಣೆ, ವಿವಿಧ ಯಂತ್ರೋಪಕರಣಗಳು, ಗಾಜಿನ ಉಪಕರಣಗಳು, ಹಳೆಯ ತೋಟಗಾರಿಕೆ ಉಪಕರಣಗಳನ್ನು(ವಿಲೇವಾರಿ) ಮಾಡುವ ಬಗ್ಗೆ, ಬಯೋಟೆಕ್ನಾಲಜಿ ಕೇಂದ್ರದ ಭದ್ರತೆಗಾಗಿ ಗುತ್ತಿಗೆ ಆಧಾರದ ಮೇಲೆ ಭದ್ರತಾ ಸಿಬ್ಬಂಧಿಯನ್ನು ನೇಮಿಸುವ ಬಗ್ಗೆ, ಹಾಗೂ ಸಾಂಪ್ರದಾಯಿಕ ತೋಟಗಾರಿಕಾ ಬೆಳೆಗಳ ಭೌಗೋಳಿಕ ಗುರುತಿಸುವಿಕೆ ಮತ್ತು ದಾಖಲಾತಿ ಮಾಡುವ ಬಗ್ಗೆ ಟೆಂಡರು** ಎಂದು ಪ್ರತ್ಯೇಕವಾಗಿ ನಮೂದಿಸಿ ತೋಟಗಾರಿಕೆ ಉಪ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು–76 ರವರಿಗೆ ದಿನಾಂಕ 21-01-2006 ರ 2.00 ಗಂಟೆಯ ಒಳಗೆ ಅಂಚೆ ಅಥವಾ ಮುದ್ದಾಂ ಕಳುಹಿಸುವುದು. ಟೆಂಡರುಗಳನ್ನು ಅದೇ ದಿನ ಸಂಜೆ 4.00 ಗಂಟೆಗೆ ಬಯೋಟೆಕ್ನಾಲಜಿ ಕೇಂದ್ರದ ಆವರಣದಲ್ಲಿ ತೆರೆಯಲಾಗುವುದು.

**ತೋಟಗಾರಿಕೆ ನಿರ್ದೇಶಕರು.**

**ತೋಟಗಾರಿಕೆ ನಿರ್ದೇಶನಾಲಯ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು,**

**ಅಂಚೆ ಪೆಟ್ಟಿಗೆ ಸಂಖ್ಯೆ: 7648, ಬೆಂಗಳೂರು-76**

**ಟೆಂಡರ್ ಪ್ರಕಟಣೆ**

**ಸಂಖ್ಯೆ:ತೋಇ: ಜೀವತಾ: ತೋಉನಿ:ಅಂಕ್ಕೃ:ಸತೋಅ-1:54:2005-06, ಬೆಂಗಳೂರು, ದಿನಾಂಕ:6ನೇ ಡಿಸೆಂಬರ್, 2005**

- ಟೆಂಡರ್ ಫ್ಲಾರಂ ಬೆಲೆ ರೂ. 25/– ಮಾತ್ರ. ಟೆಂಡರ್ ಫಾರಂನ್ನು ಈ ಕಛೇರಿಯಲ್ಲಿ ಹಣ ನೀಡಿ ಪಡೆಯಬಹುದು. ಟೆಂಡರ್ ಫ್ಲಾರಂ ಹಣ ಹಿಂತಿರುಗಿಸಲಾಗುವುದಿಲ್ಲ.
- ಟೆಂಡರ್ ಫ್ಲಾರಂನ್ನು ತೋಟಗಾರಿಕೆ ಉಪ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಮಾತ್ರ ಕೊಡಲಾಗುತ್ತದೆ. ವಿ.ಪಿ.ಪಿ. ಮುಖಾಂತರ ಕಳುಹಿಸಿಕೊಡಲಾಗುವುದಿಲ್ಲ.
- ಟೆಂಡರ್ ಫ್ಲಾರಂ ದಿನಾಂಕ 09-01-2006 ರಿಂದ 19-01-2006 ರ ಸಂಜೆ 5-00 ರ ವರೆಗೆ ಮಾತ್ರ ನೀಡಲಾಗುವುದು. ಮೊಹರು ಮಾಡಿದ ಟೆಂಡರನ್ನು ವಾಪಾಸ್ಸು ನೀಡಲು ಅಂತಿಮ ದಿನಾಂಕ 21-01-2006 ಮದ್ಯಾಹ್ನ 2.00 ಗಂಟೆಯವರೆಗೆ ಮಾತ್ರ.
- ಟೆಂಡರನ್ನು ದಿನಾಂಕ:21-01-2006 ರಂದು ಸಂಜೆ 4.00 ಗಂಟೆಗೆ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು ಇಲ್ಲಿ ತೆರೆಯಲಾಗುವುದು.
- ಸದರಿ ಟೆಂಡರಿನಲ್ಲಿ ಪ್ರಕಟಿಸಿರುವ ವಿವಿಧ ಪ್ರಯೋಗ ಶಾಲೆಗಳಿಗೆ ಸಂಬಂಧಪಟ್ಟಂತೆ ಯಂತ್ರೋಪಕರಣಗಳ ವಾರ್ಷಿಕ ನಿರ್ವಹಣೆ, ವಿವಿಧ ಯಂತ್ರೋಪಕರಣಗಳು, ಗಾಜಿನ ಉಪಕರಣಗಳು, ಹಳೆಯ ತೋಟಗಾರಿಕೆ ಉಪಕರಣಗಳನ್ನು(ವಿಲೇವಾರಿ) ಮಾಡುವ ಬಗ್ಗೆ, ಬಯೋಟೆಕ್ನಾಲಜಿ ಕೇಂದ್ರದ ಭದ್ರತೆಗಾಗಿ ಗುತ್ತಿಗೆ ಆಧಾರದ ಮೇಲೆ ಭದ್ರತಾ ಸಿಬ್ಬಂಧಿಯನ್ನು ನೇಮಿಸುವ ಬಗ್ಗೆ, ಹಾಗೂ ವಿವಿಧ ತೋಟಗಾರಿಕಾ ಬೆಳೆಗಳ ಸಾಪ್ರದಾಯಿಕ ತಳಿಗಳ ಭೌಗೋಳಿಕ ಗುರುತಿಸುವಿಕೆ ಮತ್ತು ದಾಖಲಾತಿ ಮಾಡುವ ಬಗ್ಗೆ ತಾಂತ್ರಿಕ ವಿವರಣೆಗಳನ್ನು ಹಾಗೂ ಸರಬರಾಜು ನಿಬಂಧನೆಗಳ ಪೂರ್ಣ ವಿವರಣೆಗಳನ್ನು ಸದರಿ ಕಛೇರಿಯಲ್ಲಿ ಪಡೆಯಬಹುದು.
- ತೆರಿಗೆ ಮತ್ತು ಅಬ್ಕಾರಿ ಶುಲ್ಕವನ್ನು ಸ್ಪಷ್ಟವಾಗಿ ನಮೂದಿಸುವುದು. ಪ್ಯಾಕಿಂಗ್ ಚಾರ್ಜ್, ಸಾಗಾಣಿಕೆ ವೆಚ್ಚ, ವಿಮೆ ಎಲ್ಲವನ್ನು ಸೇರಿಸಿ ತಗಲುವ ಕನಿಷ್ಠ ದರವನ್ನು ನಮೂದಿಸುವುದು.

- ಟೆಂಡರುದಾರರು ನಮೂದಿಸುವ ಯಂತ್ರೋಪಕರಣಗಳ ಹಾಗೂ ಬಯೋಟೆಕ್ನಾಲಜಿ ಕೇಂದ್ರದ ವಿದ್ಯುತ್ ವ್ಯವಸ್ಥೆಯ ವಾರ್ಷಿಕ ನಿರ್ವಹಣೆಗಾಗಿ ವಿವಿಧ ಹಳೆಯ ಯಂತ್ರೋಪಕರಣಗಳು, ಗಾಜಿನ ಉಪಕರಣಗಳು, ತೋಟಗಾರಿಕೆ ಉಪಕರಣಗಳನ್ನು (ವಿಲೇವಾರಿ) ಮಾಡುವ ಬಗ್ಗೆ ಪ್ರತ್ಯೇಕವಾಗಿ ರೂ. 2000/- ರಷ್ಟು ಮೊತ್ತದ ಇ.ಎಂ.ಡಿ. ಮೊಬಲಗನ್ನು ಹಾಗೂ ಬಯೋಟೆಕ್ನಾಲಜಿ ಕೇಂದ್ರದ ಭದ್ರತೆಗಾಗಿ ಗುತ್ತಿಗೆ ಆಧಾರದ ಮೇಲೆ ಭದ್ರತಾ ಸಿಬ್ಬಂಧಿಯನ್ನು ನೇಮಿಸುವ ಬಗ್ಗೆ, ಹಾಗೂ ವಿವಿಧ ತೋಟಗಾರಿಕಾ ಬೆಳೆಗಳ ಸಾಂಪ್ರದಾಯಿಕ ತಳಿಗಳ ಭೌಗೋಳಿಕ ಗುರುತಿಸುವಿಕೆ ಮತ್ತು ದಾಖಲಾತಿ ಮಾಡುವ ಬಗ್ಗೆ ರೂ. 5,000/- ರಷ್ಟು ಇ.ಎಂ.ಡಿ. ಮೊಬಲಗನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ ಹುಂಡಿಯ ಮುಖಾಂತರ ಹಿರಿಯ ಸಹಾಯಕ ತೋಟಗಾರಿಕೆ ಉಪ ನಿರ್ದೇಶಕರು, ಅಂಗಾಂಶ ಕೃಷಿ, ಬೆಂಗಳೂರು ರವರ ಹೆಸರಿನಲ್ಲಿ ಟೆಂಡರ್ ಅರ್ಜಿಯೊಂದಿಗೆ ಸಲ್ಲಿಸಬೇಕು.
- ಟೆಂಡರ್ ಅನುಮೋದಿತ ಸಂಸ್ಥೆಯು ಶೇ. 5 ರಷ್ಟು ಮೊತ್ತದ ಇ.ಎಂ.ಡಿ ಮೊಬಲಗನ್ನು ಸದರಿ ಅಧಿಕಾರಿಯವರ ಹೆಸರಿನಲ್ಲಿ ಖರೀದಿ ಆದೇಶ/ಕಾರ್ಯಾದೇಶ ನೀಡುವ ಮುನ್ನ ನೀಡಬೇಕು.
- ತಾಂತ್ರಿಕ ಮತ್ತು ಆರ್ಥಿಕ ಟೆಂಡರ್ ಬಿಡ್ಡುಗಳನ್ನು ಪ್ರತ್ಯೇಕವಾಗಿ ಸಲ್ಲಿಸಬೇಕು.
- ಸಂಸ್ಥೆಯವರು ತಮ್ಮ ಆದಾಯ ತೀರುವಳಿ ದೃಢೀಕರಣ ಪತ್ರವನ್ನು (ಅಂತಿಮವಾಗಿ ಸಲ್ಲಿಸಿರುವ) ಟೆಂಡರ್ ಜೊತೆಯಲ್ಲಿ ಸಲ್ಲಿಸುವುದು.
- ಯಾವುದೇ ಕಾರಣ ನೀಡದೇ ಟೆಂಡರ್ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕೆಳ ಸಹಿದಾರರಿಗೆ ಕಾಯ್ದಿರಿಸಲಾಗಿದೆ.
- ಕೈಗೊಳ್ಳುವ ಕೆಲಸಗಳ ಬಗ್ಗೆ ಆದೇಶ ನೀಡಿದ 30 ದಿನಗಳಲ್ಲಿ ಸರಬರಾಜು ಮಾಡಿದ ನಂತರ, ಕಾರ್ಯಕ್ಷಮತೆ ಹಾಗೂ ಗುಣ ಮಟ್ಟದ ಬಗ್ಗೆ ತೃಪ್ತಿಯಾದ ಮೇಲೆ ಹಣ ಬಿಡುಗಡೆ ಮಾಡಲಾಗುವುದು.
- ಯಂತ್ರೋಪಕರಣಗಳ ವಾರ್ಷಿಕ ನಿರ್ವಹಣೆಯನ್ನು ಕೈಗೊಳ್ಳುವ ಸಂಸ್ಥೆಯವರು ಯಂತ್ರೋಪಕರಣಗಳ **ಅಧಿಕೃತ** ಸರ್ವೀಸಿಂಗ್ ಡೀಲರ್ ಸಂಸ್ಥೆಗಳಾಗಿರಬೇಕು.
- ಗುತ್ತಿಗೆ ಆಧಾರದ ಮೇಲೆ ಭದ್ರತಾ ಸಿಬ್ಬಂಧಿಯನ್ನು ನೇಮಿಸುವ ಬಗ್ಗೆ, ಸರ್ಕಾರಿ/ಸರ್ಕಾರೇತರ ಬಯೋಟೆಕ್ನಾಲಜಿ ಕೇಂದ್ರಗಳಲ್ಲಿ ಕಾರ್ಯ ನಿರ್ವಹಿಸಿರುವ ಬಗ್ಗೆ ಕನಿಷ್ಟ ಐದು ವರ್ಷಗಳ ಅನುಭವವಿರಬೇಕು, ಈ ಬಗ್ಗೆ ದೃಢೀಕರಣ ನೀಡಬೇಕು.
- **ದಿನಾಂಕ 21-01-2006** ರಂದು **ಬೆಳಿಗ್ಗೆ 11.30 ಗಂಟೆಗೆ** ಹಳೆಯ ವಿದ್ಯುತ್ ಯಂತ್ರೋಪಕರಣಗಳು ಹಾಗೂ ಹಳೆಯ ಪ್ರಯೋಗಶಾಲಾ ಯಂತ್ರೋಪಕರಣಗಳನ್ನು ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು ಇಲ್ಲಿನ ಆವರಣದಲ್ಲಿ ಸಾರ್ವಜನಿಕರ ಸಮ್ಮುಖದಲ್ಲಿ ಬಹಿರಂಗ ಹರಾಜು ಮಾಡಲಾಗುವುದು. ಹರಾಜಿನಲ್ಲಿ ಭಾಗವಹಿಸುವವರು ಟೆಂಡರಿನಲ್ಲಿ ಭಾಗವಹಿಸಲೇಬೇಕು.
- ಹಳೆಯ ಪ್ರಯೋಗಶಾಲಾ ಯಂತ್ರೋಪಕರಣಗಳನ್ನು ಖರೀದಿ ಮಾಡುವ ಬಿಡ್ಡುದಾರರು ಅತಿ ಹೆಚ್ಚಿನ ಮೊಬಲಗನ್ನು ನಿಗಧಿಪಡಿಸಿ ದರವನ್ನು ನಮೂದಿಸುವುದು.
- **ಸಾಂಪ್ರದಾಯಿಕ ತಳಿಗಳನ್ನು ಗುರುತಿಸಿ ದಾಖಲಾತಿ ಮಾಡುವ ಬಗ್ಗೆ:** ಯಾವುದೇ ಸಂಸ್ಥೆಯು ಸದರಿ ಕಾರ್ಯಕ್ರಮವನ್ನು 2 ವರ್ಷಗಳ ಅವಧಿಯಲ್ಲಿ ಪೂರೈಸುವುದು, ಸಂಸ್ಥೆಯು ಜೀವ ವೈವಿದ್ಯತೆಯ ಸಂರಕ್ಷಣಾ ಕ್ಷೇತ್ರದಲ್ಲಿ ಕನಿಷ್ಟ 10 ವರ್ಷಗಳ ಅನುಭವ ಹೊಂದಿದ್ದು ಇಂತಹ ಯೋಜನೆಗಳನ್ನು ಅನುಷ್ಠಾನಗೊಳಿಸಿರಬೇಕು. ಸಸ್ಯ ವಿಜ್ಞಾನ ಹಾಗೂ ಬೀಜಗಳ ಸಂರಕ್ಷಣಾ ಕ್ಷೇತ್ರಗಳಲ್ಲಿ ಪರಿಣಿತಿ ಹೊಂದಿರುವ ಸರ್ಕಾರಿ/ಸರ್ಕಾರೇತರ ಸಂಸ್ಥೆಗಳು ಮಾತ್ರ ಭಾಗವಹಿಸಲು ಮಾತ್ರ ಅವಕಾಶವಿರುತ್ತದೆ.
- **ಸರ್ಕಾರದ ನಿಯಮಾವಳಿಗಳ ಪ್ರಕಾರ ಗುತ್ತಿಗೆದಾರರ/ಸಂಸ್ಥೆಗಳ/ಸರ್ಕಾರೇತರ ಸಂಸ್ಥೆಗಳ ಮೂಲ ಬಿಲ್ಲಿನಲ್ಲಿಯೇ ಸೇವಾ ತೆರಿಗೆ, ವರ್ಕ್ ಕಾಂಟ್ರಾಕ್ಟ್ ತೆರಿಗೆ ಮತ್ತು ಆದಾಯ ತೆರಿಗೆ (2.3%) ಗಳನ್ನು ಕಟಾವು ಮಾಡಲಾಗುವುದು.**
- ಆದಾಯ ತೆರಿಗೆ ಪ್ರಮಾಣ ಪತ್ರವನ್ನು ಟೆಂಡರ್ ಫಾರಂ ಜೊತೆ ಲಗತ್ತಿಸುವುದು.
- ಮೇಲ್ಕಂಡ ಷರತ್ತುಗಳಿಗೆ ಬದ್ದರಾಗಿರುವುದರ ಬಗ್ಗೆ ಮುಚ್ಚಳಿಕೆ ಪತ್ರವನ್ನು ಸ್ಟ್ಯಾಂಪ್ ಪೇಪರಿನಲ್ಲಿ ಬರೆದುಕೊಡುವುದು.

**ತೋಟಗಾರಿಕೆ ನಿರ್ದೇಶಕರು.**

**ತೋಟಗಾರಿಕೆ ನಿರ್ದೇಶನಾಲಯ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು,**
**ಅಂಚೆ ಪೆಟ್ಟಿಗೆ ಸಂಖ್ಯೆ:7648, ಬೆಂಗಳೂರು-76**
**ಟೆಂಡರ್ ಪ್ರಕಟಣೆ**

**ಸಂಖ್ಯೆ:ತೋಇ: ಜೀವತಾ: ತೋಉನಿ:ಅಂಕೃ:ಸತೋಅ-1:54:2005-06, ಬೆಂಗಳೂರು, ದಿನಾಂಕ:6ನೇ ಡಿಸೆಂಬರ್, 2005**

ತಾಂತ್ರಿಕ ವಿವರಗಳು:

- **ಬಯೋಟೆಕ್ನಾಲಜಿ ಕೇಂದ್ರದ ವಿವಿಧ ಪ್ರಯೋಗಶಾಲೆಗಳಲ್ಲಿನ ಯಂತ್ರೋಪಕರಣಗಳ ವಾರ್ಷಿಕ ನಿರ್ವಹಣೆ ಕೈಗೊಳ್ಳುವ ಬಗ್ಗೆ:**
  ೧. ಅಟಾಮಿಕ್ ಅಬ್ಸಾರ್ಪ್ಷನ್ ಸ್ಪೆಕ್ಟ್ರೋಫೋಟೋಮೀಟರ್
  ೨. ಹಾರಿಜಾಂಟಲ್ ಸ್ಟೀಂ ಸ್ಟರಿಲೈಜರ್
  ೩. ಬಾಯ್ಲರ್
  ೪. ಹವಾ ನಿಯಂತ್ರಣ ವ್ಯವಸ್ಥೆಗಳು
  ೫. ಜನರೇಟರ್

೬. ಇಪಬಿಕ್ಸ್
೭. ನೀರಿನ ಶುದ್ಧೀಕರಣ ವ್ಯವಸ್ಥೆ
೮. ಗೆರ್ಡಾರ್ಟ್ ಡೈಜೆಷನ್ ಅಂಡ್ ಡಿಸ್ಟಿಲ್ಲೇಷನ್ ಯೂನಿಟ್
೯. ಲಾಲ್‌ಭಾಗ್‌ನಲ್ಲಿರುವ ಕೋಲ್ಡ್ ಸ್ಟೋರೇಜ್
೧೦. ಲ್ಯಾಮಿನಾರ್ ಏರ್‌ಫ್ಲೋ ಬೆಂಚಸ್‌ಗಳು

- **ಬಯೋಟೆಕ್ನಾಲಜಿ ಕೇಂದ್ರದ ವಿದ್ಯುತ್ ವ್ಯವಸ್ಥೆಯ ವಾರ್ಷಿಕ ನಿರ್ವಹಣೆ ಕೈಗೊಳ್ಳುವ ಬಗ್ಗೆ:**
  ೧. ಬಯೋಟೆಕ್ನಾಲಜಿ ಕೇಂದ್ರದ ವಿದ್ಯುತ್ ವ್ಯವಸ್ಥೆ ಹಾಗೂ (ಟ್ರಾನ್ಸ್‌ಫಾರ್ಮರ್ ಮತ್ತು ಎಲೆಕ್ಟ್ರಿಕಲ್ ಪ್ಯಾನಲ್ ಸೇರಿ)
  ೨. ಅಂಗಾಂಶ ಕೃಷಿ ಪ್ರಯೋಗಶಾಲೆ
- **ಅನುಪಯೋಗಿ ಯಂತ್ರೋಪಕರಣಗಳು/ಗಾಜಿನ ಉಪಕರಣಗಳು/ತೋಟಗಾರಿಕೆ ಉಪಕರಣಗಳ ವಿಲೇವಾರಿ**
- **ಬಯೋಟೆಕ್ನಾಲಜಿ ಕೇಂದ್ರದ ಭದ್ರತೆಗಾಗಿ ಗುತ್ತಿಗೆ ಆಧಾರದ ಮೇಲೆ ಭದ್ರತಾ ಸಿಬ್ಬಂಧಿಯನ್ನು ನೇಮಿಸುವ ಬಗ್ಗೆ**
- **ಸಾಂಪ್ರದಾಯಿಕ ತೋಟಗಾರಿಕೆ ಬೆಳೆಗಳ ಭೌಗೋಳಿಕ ಗುರುತಿಸುವ ಹಾಗೂ ದಾಖಲಾತಿ ಕೈಗೊಳ್ಳುವ ಬಗ್ಗೆ.**

**ತೋಟಗಾರಿಕೆ ನಿರ್ದೇಶಕರು.**

**DEPARTMENT OF HORTICULTURE**
**DIRECTORATE OF HORTICULTURE, BIOTECHNOLOGY CENTRE, HULIMAVU, PO BOX No.7648, BANGALORE-560 076**

**TENDER NOTICE**

**No. DH:BIOTECH:DDH:TC:AHO1:54:2005-06, Bangalore, Dated:6th December, 2005**

Sealed tenders are invited to take up annual maintenance of equipments of various laboratories/electrical system of Biotech Centre, disposal of unserviceable equipments, broken glasswares & horticultural implements etc., providing security personnel to the Biotech Centre on contract basis and to take up study on identification & documentation of traditional horticultural crops from companies, institutions and non governmental organisations(NGO's). The tender forms, terms and conditions and technical specifications may be obtained from the office of the **Deputy Director of Horticulture (Tissue Culture),** Biotechnology Centre, Hulimavu, Bangalore-76 during office hours from 09-01-2006 to 19-01-2006.

Application fee for each tender form is Rs. 25/-. The sealed tenders prescribed on the cover as " **TENDER TO TAKE UP ANNUAL MAINTENANCE OF EQUIPMENTS OF VARIOUS LABORATORIES/ELECTRICAL SYSTEM OF BIOTECH CENTRE/DISPOSAL OF UNSERVICEABLE EQUIPMENTS, BROKEN GLASSWARES & HORTICULTURAL IMPLEMENTS ETC.,/PROVIDING SECURITY PERSONNEL TO THE BIOTECH CENTRE ON CONTRACT BASIS/TO TAKE UP STUDY ON IDENTIFICATION & DOCUMENTATION OF TRADITIONAL HORTICULTURAL CROPS"** may be sent either through post or in person so as to reach **Deputy Director of Horticulture (Tissue Culture),** Biotechnology Centre, Hulimavu, Bangalore-76 on or before 2 p.m of 21-01-2006.
Tenders will be opened on the same day i.e., 21-01-2006 at 4.00 p.m in the premises of Biotechnology Centre, Hulimavu, Bangalore-76.

**DIRECTOR OF HORTICULTURE.**

**DEPARTMENT OF HORTICULTURE**
**DIRECTORATE OF HORTICULTURE, BIOTECHNOLOGY CENTRE, HULIMAVU, PO BOX No.7648, BANGALORE-560 076**

**TENDER NOTICE**

**No. DH:BIOTECH:DDH:TC:AHO1:54:2005-06, Bangalore, Dated: 6th December, 2005**

**TERMS AND CONDITION OF THE TENDER**

1) The cost of the tender form is Rs.25/- each (Non refundable). The tender should be applied separately to each category.
2) Tender form can be obtained from 09-01-2006 to 19-01-2006 from the Office of the Deputy Director of Horticulture (Tissue Culture), Biotechnology Centre, Hulimavu, Bangalore-76 during office hours.
3) Sealed tenders will be accepted till 2.00 pm of 21-01-2006. Tenders sent after 2.00 pm of that day will not be accepted. Tenders will be opened at 4.00 pm on the same day (21-01-2006) at Biotechnology Centre, Hulimavu, Bangalore-76.
4) Complete details of technical specifications, terms, and quality details can be obtained from the Office of **the Deputy Director of Horticulture (Tissue Culture),** Biotechnology Centre, Hulimavu, Bangalore-76 during office hours.
5) EMD of Rs. 2000 as an initial deposit to take up annual maintenance of equipments and elctrical system of Biotech Centre and disposal of unserviceable equipments, broken glasswares & horticultural implements etc., and Rs.5,000/- for providing security personnel to the Biotech Centre on contract basis and to take up study on identification & documentation of traditional horticultural crops, should be submitted through crossed Demand Draft. Cheques and National Saving Certificates will not be accepted.

6) Crossed Demand draft should be obtained from any Nationalized Banks in Bangalore in the name of the **Deputy Director of Horticulture (Tissue Culture), Bangalore**

7) Lowest Price to take up above work/programs must be quoted in the tender form. The rates quoted should be inclusive of all taxes, freights, insurance, transport charges, handling and packing charges.

8) **Technical tenders and financial tenders** should be given in separate sealed envelopes and envelope should be subscribed as **technical tender or financial tender** as the case may be for the works/programs.

9) Successful tenderer should submit Demand draft of 5% of the total price for the work/program quoted by the firm/institution before issuing the work order/supply order in the name of the **Deputy Director of Horticulture (Tissue Culture), Bangalore.**

10) The company/institution/NGO shall ensure quality of the work carried out with regards to taking up of annual maintenance of equipments/ providing security personnel to the Biotech Centre on contract basis for a minimum period of one year from the date of work carried out.

11) Providing security personnel to the Biotechnology Centre on contract basis priority will be given to those who have the work experience of working in any government/ private Biotechnology Centre/Laboratories etc.

12) **Study on identification & documentation of traditional Horticultural crops:** the project period will be for 2 years, the organisation/institution should have min. 10 years experience in the field of Plant Biodiversity & Seed Conservation. It should have experience of onfarm conservation of diversed landraces & knowledge about the registration under Geographical Indications.

13) Open auction for the disposal of unserviseable equipments/broken glasswares will be held on 21-01-2006 at 11.30 am at the premises of Biotechnology Center. Those apllied for tender will be allowed for auction.

14) Director of Horticulture has the power to accept or reject the tenders without assigning any reasons.

15) The company/institution/NGO shall enclose the income tax clearance certificate along with the tender.

16) As per the Government norms work contract tax, service tax and Income tax (2.3%) of suppliers and contractor will be deducted at source.

17) The acceptance of the above rules and regulations must be given in writing on a paper with stamped signature & seal.

(Further details can be obtained from the office of the Deputy Director of Horticulture (Tissue Culture), Biotechnology Centre, Hulimavu, Bangalore-76 during office hours)

**DIRECTOR OF HORTICULTURE.**

**DEPARTMENT OF HORTICULTURE**
**DIRECTORATE OF HORTICULTURE, BIOTECHNOLOGY CENTRE, HULIMAVU, PO BOX No.7648, BANGALORE-560 076**
**TENDER NOTICE**
**No. DH:BIOTECH:DDH:TC:AHO1:54:2005-06, Bangalore, Dated: 6th December, 2005**

**Technical Details:**

- **Annual Maintenance of Equipments**
  1. Atomic absorption spectrophotometer.
  2. Horizontal steam Sterilizer.
  3. Non-IBR Boiler. (200 kg capacity-1No., 300 kg capacity-1 No)
  4. Air conditioning systems.
  5. 160 KVA Generator.
  6. EPABX.
  7. Millipore Water Purification System.
  8. Cold storage at Lalbagh.
  9. Gerhardt Digestion and Distillation Unit.
  10. Laminar air flow benches.
- **Annual Maintenance of Electrical System:**
  1. Biotechnology Centre (Including Transformer and Electrical Panels etc).
  2. Tissue Culture Laboratory.
- **Disposal of unserviseable equipments/broken glasswares/horticultural implements.**
- **Providing security personnel to the Biotechnology Centre on contract basis.**
- **Study on identification & documentation of traditional Horticultural Crops.**

PR-666 **DIRECTOR OF HORTICULTURE.**

## ಕರ್ನಾಟಕ ಅರಣ್ಯ ಇಲಾಖೆ

## ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಬೆಂಗಳೂರು ವೃತ್ತ, ಬೆಂಗಳೂರು

## ರಾಷ್ಟ್ರೀಯ ಅರಣ್ಯೀಕರಣ ಯೋಜನೆ ಫಾರೆಸ್ಟ್ ಡೆವಲಪ್‌ಮೆಂಟ್ ಯೋಜನೆಯ ಬಾಹ್ಯ ಮೌಲ್ಯಮಾಪನದ ಬಗ್ಗೆ

## ಸಂಕ್ಷಿಪ್ತ ಟೆಂಡರ್ ಅಧಿಸೂಚನೆ

**ಸಂಖ್ಯೆ: ಎ2.ಅಸಂ(ಬೆಂ)ಬಿಯುಡಿ.ಸಿಆರ್.47/2005-06, ದಿನಾಂಕ: 5ನೇ ಡಿಸೆಂಬರ್ 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಬೆಂಗಳೂರು ಗ್ರಾಮಾಂತರ ಫಾರೆಸ್ಟ್ ಡೆವಲಪ್‌ಮೆಂಟ್ ಏಜೆನ್ಸಿ ಹಾಗೂ ಕೋಲಾರ ಫಾರೆಸ್ಟ್ ಡೆವಲಪ್‌ಮೆಂಟ್ ಏಜೆನ್ಸಿಗಳ ಮುಖಾಂತರ 2002-03 ರಿಂದ 2004-05ನೇ ಸಾಲಿನವರೆಗೆ ಅನುಷ್ಠಾನಗೊಳಿಸಲಾದ ರಾಷ್ಟ್ರೀಯ ಅರಣ್ಯೀಕರಣ ಯೋಜನೆಯ ಬಾಹ್ಯ ಮೌಲ್ಯಮಾಪನ ಕಾರ್ಯ ಕೈಗೊಳ್ಳಲು ಸೂಕ್ತ ವಿದ್ಯಾರ್ಹತೆ ಹಾಗೂ ಅನುಭವ ಉಳ್ಳ ಸರ್ಕಾರೇತರ ಸಂಸ್ಥೆಗಳು, ವಿಶ್ವವಿದ್ಯಾಲಯ ಹಾಗೂ ಸದರಿ ಕ್ಷೇತ್ರದಲ್ಲಿ ಸೂಕ್ತ ಅನುಭವವುಳ್ಳ ಸಂಸ್ಥೆಗಳಿಂದ ಮುಚ್ಚಿದ ಲಕೋಟೆಯಲ್ಲಿ ಟೆಂಡರ್ ಅನ್ನು ಆಹ್ವಾನಿಸಲಾಗಿದೆ. ಸ್ವೀಕರಿಸಲಾದ ಟೆಂಡರ್ ಅನ್ನು ಅರಣ್ಯ ಸಂರಕ್ಷಣಾಧಿಕಾರಿ ಬೆಂಗಳೂರು ವೃತ್ತ ಬೆಂಗಳೂರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರಿಂದ ಟೆಂಡರ್‌ದಾರರ ಸಮಕ್ಷಮ ದಿನಾಂಕ: 29.12.2005 ರಂದು ಅಪರಾಹ್ನ 3.00 ಗಂಟೆಗೆ ತೆರೆದು ಓದಲಾಗುವುದು. ಒಂದು ವೇಳೆ ಸದರಿ ಟೆಂಡರ್ ಕರೆಯಲಾದ ದಿನಗಳು ಸಾರ್ವತ್ರಿಕ ರಜಾದಿನವೆಂದು ಘೋಷಿಸಲಾದಲ್ಲಿ, ಮರುದಿವಸ ಕೆಲಸದ ದಿನದಂದು ಟೆಂಡರ್ ಅನ್ನು ಸ್ವೀಕರಿಸಿ ತೆರೆಯಲಾಗುವುದು. ಉಳಿದ ನಿಬಂಧನೆಗಳು ಹಾಗೂ ವೇಳೆಯಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ರಾಷ್ಟ್ರೀಯ ಅರಣ್ಯೀಕರಣ ಯೋಜನೆಯ ಬಾಹ್ಯ ಮೌಲ್ಯಮಾಪನ ಕಾರ್ಯ ಕೈಗೊಳ್ಳಲು ನಿಬಂಧನೆಗಳು ಮತ್ತು ಷರತ್ತುಗಳನ್ನು ಒಳಗೊಂಡ ಟೆಂಡರ್ ಫಾರಂಗಳು ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಮೊದಲನೇ ಮಹಡಿ, ಅರಣ್ಯ ಭವನ, ಮಲ್ಲೇಶ್ವರಂ 18ನೇ ಕ್ರಾಸ್, ಬೆಂಗಳೂರು-560 003 ಇಲ್ಲಿ ಕಾರ್ಯನಿರ್ವಹಿಸುವ ಎಲ್ಲ ದಿನಗಳಂದು **29.12.2005ರ ಮಧ್ಯಾಹ್ನ 12.00** ಗಂಟೆಯವರೆಗೆ ದೊರೆಯುತ್ತವೆ. ಸದರಿ ಟೆಂಡರ್ ಫಾರಂ ಬಾಬ್ತು ರೂ.250.00 ಅನ್ನು ನಗದು ರೂಪದಲ್ಲಿ ಹಾಗೂ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ವೃತ್ತ, ಬೆಂಗಳೂರು ಇವರ ಹೆಸರಿಗೆ ರೂ.10,000 (ಹತ್ತು ಸಾವಿರ) ಮೊತ್ತದ ಡಿ.ಡಿ. ಅನ್ನು ಠೇವಣಿಯನ್ನಾಗಿ ಪಾವತಿಸಿ ಟೆಂಡರ್ ಫಾರಂ ಅನ್ನು ಪಡೆಯಬಹುದಾಗಿದೆ.

**ನಿಬಂಧನೆಗಳು ಹಾಗೂ ಷರತ್ತುಗಳು:**

1. ಷೆಡ್ಯೂಲ್‌ನಲ್ಲಿ ನಮೂದಿಸಲಾದ ಕೆಲಸದ ವಿವರ, ವಿಸ್ತೀರ್ಣ, ಹಾಗೂ ಗ್ರಾಮ ಅರಣ್ಯ ಸಮಿತಿಗಳ ಸಂಖ್ಯೆ ಹಾಗೂ ಇತರೆ ವಿವರಗಳು ಖಚಿತವಾಗಿದೆ ಎಂದು ನಂಬಲಾಗಿದ್ದರು ಸದರಿ ವಿವರಗಳು ಟೆಂಡರ್‌ದಾರರಿಗೆ ಕೇವಲ ಮಾರ್ಗಸೂಚಿಯಾಗಿದ್ದು, ಟೆಂಡರ್‌ದಾರರು ಸದರಿ ವಿವರಗಳನ್ನು ಖುದ್ದಾಗಿ ಪರಿಶೀಲಿಸಬಹುದಾಗಿದೆ. ಇಲ್ಲವಾದಲ್ಲಿ ಪ್ರಮಾಣ, ಸ್ಥಳ ಹಾಗೂ ಸಂಖ್ಯೆಗಳ ವಿವರಣೆಯು ನಿಖರವಾಗಿರುವ ಕುರಿತು ಯಾವುದೇ ಆಶ್ವಾಸನೆ ನೀಡಲಾಗುವುದಿಲ್ಲ.
2. ಕರಾರು ಮಾಡಿಕೊಂಡ ನಂತರ ಮೂರು ತಿಂಗಳ ಒಳಗಾಗಿ ವರದಿಯನ್ನು ಸಿದ್ದಪಡಿಸಿ ಸಲ್ಲಿಸುವ ಕಾರ್ಯವನ್ನು ಒಳಗೊಂಡಂತೆ ಮೌಲ್ಯಮಾಪನವನ್ನು ಪೂರ್ಣಗೊಳಿಸತಕ್ಕದ್ದು.
3. ಒಂದು ವೇಳೆ ನಿಗದಿತ ಕಾಲಾವಧಿಯಲ್ಲಿ ಮೌಲ್ಯಮಾಪನ ಕಾರ್ಯವನ್ನು ಪೂರೈಸಲಾಗದಿದ್ದಲ್ಲಿ, ಪ್ರಾಧಿಕಾರವು ಅಂತಹ ಕರಾರನ್ನು ರದ್ದುಗೊಳಿಸಲು ಅಥವಾ ಮೂಲ ಟೆಂಡರ್‌ದಾರರ ಜವಾಬ್ದಾರಿ ಹಾಗೂ ವೆಚ್ಚದಲ್ಲಿ ಕಾಮಗಾರಿಯನ್ನು ಮರು ಟೆಂಡರ್ ಅನ್ನು ಕರೆದು ಬೇರೆಯವರಿಗೆ ವಹಿಸಿಕೊಡಬಹುದಾಗಿದೆ. ಅಂತಹ ಸಂದರ್ಭದಲ್ಲಿ ಪಾವತಿಸಲಾದ ಠೇವಣಿ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಅಲ್ಲದೇ ಉಂಟಾದ ನಷ್ಟದ ಮೊತ್ತವನ್ನು ತಪ್ಪಿತಸ್ಥ ಟೆಂಡರ್‌ದಾರರಿಂದ ವಸೂಲಿ ಮಾಡಲು ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ಸೂಕ್ತ ಕ್ರಮ ಕೈಗೊಳ್ಳಲಾಗುವುದು.
4. ಮೌಲ್ಯಮಾಪನದಲ್ಲಿ 2002-03 ರಿಂದ 2004-05ನೇ ಸಾಲಿನವರೆಗೆ ಬೆಂಗಳೂರು ಗ್ರಾಮಾಂತರ ಫಾರೆಸ್ಟ್ ಡೆವಲಪ್‌ಮೆಂಟ್ ಏಜೆನ್ಸಿ ಹಾಗೂ ಕೋಲಾರ ಫಾರೆಸ್ಟ್ ಡೆವಲಪ್‌ಮೆಂಟ್ ಏಜೆನ್ಸಿ ಮೂಲಕ ರಾಷ್ಟ್ರೀಯ ಅರಣ್ಯೀಕರಣ ಯೋಜನೆಯಡಿ ಕೈಗೊಳ್ಳಲಾದ ಎಲ್ಲಾ ಕಾಮಗಾರಿಗಳೂ ಸೇರಿರುತ್ತವೆ.
5. ಮೌಲ್ಯಮಾಪನ ಕಾರ್ಯವು ಪ್ರತಿಯೊಂದು ಕಾಮಗಾರಿಯನ್ನು ಆಯಾ ಕಾಮಗಾರಿಗೆ ನಿಗದಿಪಡಿಸಿದ ಧ್ಯೇಯೋದ್ದೇಶದಂತೆ ಕೈಗೊಳ್ಳಲಾಗಿದೆಯೋ ಹಾಗೂ ಸದರಿ ಧ್ಯೇಯೋದ್ದೇಶಗಳನ್ನು ಎಷ್ಟರ ಮಟ್ಟಿಗೆ ಪೂರೈಸಲಾಗಿದೆ ಎಂಬ ಕುರಿತು ನಿರ್ಧರಿಸತಕ್ಕ ಅಂಶವನ್ನು ಒಳಗೊಂಡಿರುತ್ತದೆ.
6. ಅರಣ್ಯೀಕರಣ ಮೌಲ್ಯಮಾಪನ ಕಾರ್ಯದಲ್ಲಿ ಅನುಭವ ಉಳ್ಳ ಖ್ಯಾತ ಹಾಗೂ ಅನುಭವವುಳ್ಳ ಸಂಸ್ಥೆಗಳಿಗೆ ಆದ್ಯತೆ ನೀಡಲಾಗುವುದು.
7. ಟೆಂಡರ್‌ದಾರರು ಟೆಂಡರ್ ಫಾರಂನೊಂದಿಗೆ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ವೃತ್ತ, ಬೆಂಗಳೂರು ಇವರ ಹೆಸರಿನಲ್ಲಿ ರೂ.10,000 ಮೊತ್ತದ ಡಿ.ಡಿ.ಯನ್ನು ಠೇವಣಿ ರೂಪದಲ್ಲಿ ಪಾವತಿಸತಕ್ಕದ್ದು.
8. ಠೇವಣಿ ಮೊತ್ತವನ್ನು ಹೊಂದಿಲ್ಲದ ಟೆಂಡರ್ ಫಾರಂ ಅನ್ನು ತಿರಸ್ಕರಿಸಲಾಗುವುದು.
9. ಯೋಜನೆಯ ಅನುಷ್ಠಾನದಿಂದ ಜನರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಯ ಮೇಲೆ ಉಂಟಾಗುವ ಪರಿಣಾಮಗಳ ಕುರಿತು ಮಾಹಿತಿಯನ್ನು ಶೇಖರಿಸುವ ಕೆಲಸವನ್ನು ಮೌಲ್ಯಮಾಪನ ಕಾರ್ಯವು ಒಳಗೊಂಡಿರತಕ್ಕದ್ದು.
10. ಅರಣ್ಯೀಕರಣ ವಿಷಯದ ಬಗೆಗಿನ ಮೌಲ್ಯಮಾಪನ ಕಾರ್ಯವು ಶೇಕಡಾವಾರು ಬದುಕುಳಿದ ಸಸಿಗಳ ಸಂಖ್ಯೆ ಹಾಗೂ ಸಾಮಾಜಿಕ ಆರ್ಥಿಕ ಹಾಗೂ ಜೀವಿ ಪರಿಸ್ಥಿತಿಯ ಕೋನಗಳಿಂದ ಉಂಟಾಗುವ ಪರಿಣಾಮದ ಕುರಿತು ಮಾಹಿತಿಯನ್ನು ಒಳಗೊಂಡಿತಕ್ಕದ್ದು.
11. ಬೆಂಗಳೂರು ಗ್ರಾಮಾಂತರ ವಿಭಾಗದ 1200 ಹೆಕ್ಟೇರ್ ಪ್ರದೇಶದಲ್ಲಿನ 48 ಗ್ರಾಮ ಅರಣ್ಯ ಸಮಿತಿಗಳ ಮುಖಾಂತರ ಕೈಗೊಳ್ಳಲಾದ 48 ಸ್ಥಳಗಳಲ್ಲಿ ಹಾಗೂ ಕೋಲಾರ ವಿಭಾಗದಲ್ಲಿ 900 ಹೆಕ್ಟೇರ್ ಪ್ರದೇಶದಲ್ಲಿ 31 ಗ್ರಾಮ ಅರಣ್ಯ ಸಮಿತಿಗಳ ಮುಖಾಂತರ ಕೈಗೊಳ್ಳಲಾದ 37 ಸ್ಥಳಗಳಲ್ಲಿ ಮೌಲ್ಯಮಾಪನ ಕಾರ್ಯವು ಶೇಕಡಾ 10 ರಷ್ಟು ಪ್ರದೇಶವನ್ನು ಒಳಗೊಂಡಿರುತ್ತದೆ.

12. 2002-03 ರಿಂದ 2004-05ನೇ ಸಾಲಿನವರೆಗೆ ಬೆಂಗಳೂರು ಗ್ರಾಮಾಂತರ ವಿಭಾಗ ಹಾಗೂ ಕೋಲಾರ ವಿಭಾಗದಲ್ಲಿ ರಾಷ್ಟ್ರೀಯ ಅರಣ್ಯೀಕರಣ ಯೋಜನೆಯಡಿ ಕೈಗೊಂಡಿರುವ ಎಲ್ಲಾ ಕಾಮಗಾರಿಗಳನ್ನು ಒಳಗೊಂಡಿರುತ್ತದೆ.
13. ಮೌಲ್ಯಮಾಪನ ತಂಡವು ರಾಷ್ಟ್ರೀಯ ಅರಣ್ಯೀಕರಣ ಯೋಜನೆಯಡಿ ಬೆಳೆಸಲಾದ ನೆಡುತೋಪುಗಳ ವಿವರಗಳನ್ನು ಹಾಗೂ ಇನ್ನಿತರೆ ವಿವರಗಳನ್ನು ಈ ಕಛೇರಿಯಿಂದಾಗಲೀ ಅಥವಾ ಸಂಬಂಧಿಸಿದ ವಿಭಾಗ ಕಛೇರಿಗಳಿಂದ ಕಛೇರಿಯ ಕಾರ್ಯ ನಿರ್ವಹಿಸುವ ಎಲ್ಲಾ ದಿನಗಳಂದು ಪಡೆದುಕೊಳ್ಳಬಹುದು.
14. ಮಾದರಿಯಾಗಿ ಸಂಗ್ರಹಿಸಲಾದ ಮಾಹಿತಿಯನ್ನು ಕ್ಷೇತ್ರದಲ್ಲಿ ಪರಿಶೀಲಿಸತಕ್ಕದ್ದು ಮತ್ತು ಶೇಕಡಾವಾರು ಬದುಕುಳಿದ ಸಸಿಗಳ ಸಂಖ್ಯೆ, ಕೈಗೊಳ್ಳಲಾದ ಕಾಮಗಾರಿಯ ಶ್ರೇಷ್ಟತೆ ಹಾಗೂ ಇನ್ನಿತರ ಬೆಳವಣಿಗೆಯ ಮಾನದಂಡಗಳ ಕುರಿತು ಸಂಗ್ರಹಿಸಲಾದ ಮಾಹಿತಿಯನ್ನು ಮೌಲ್ಯಮಾಪನ ತಂಡವು ಅವಶ್ಯವಾಗಿ ದಾಖಲಿಸತಕ್ಕದ್ದು.
15. ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಹಾಗೂ ಆಸ್ತಿಯನ್ನು ರಕ್ಷಣೆ ಮಾಡುವಲ್ಲಿ ಜಂಟಿ ಅರಣ್ಯ ಯೋಜನೆ ಮತ್ತು ನಿರ್ವಹಣೆಯ ಮುಖಾಂತರ ಜನಗಳ ಸಹಭಾಗಿತ್ವ ಹಾಗೂ ಇದರಿಂದಾಗಿ ಕಾರ್ಯಕ್ರಮಗಳ ಮೇಲೆ ಉಂಟಾಗುವ ಪರಿಣಾಮಗಳ ಕುರಿತು ಮೌಲ್ಯಮಾಪನ ತಂಡವು ಬೆಳಕು ಚೆಲ್ಲತಕ್ಕದ್ದು.
16. ನಿಬಂಧನೆ ಹಾಗೂ ಷರತ್ತಿನಲ್ಲಿ ಉದ್ಭವಿಸಬಹುದಾದ ತಕರಾರುಗಳಿಗೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರದ ನಿರ್ಧಾರವೇ ಅಂತಿಮವಾಗಿರುತ್ತದೆ.
17. ಸಕ್ಷಮ ಪ್ರಾಧಿಕಾರವು ಟೆಂಡರ್ ಅನ್ನು ಯಾವುದೇ ಕಾರಣ ನೀಡದೇ ಸ್ವೀಕರಿಸುವ ಅಥವಾ ತಿರಸ್ಕರಿಸುವ ಸಂಪೂರ್ಣ ಅಧಿಕಾರವನ್ನು ಹೊಂದಿರುತ್ತದೆ.

ಪಿ.ಆರ್. 667 ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ವೃತ್ತ, ಬೆಂಗಳೂರು.

**FORM-IV**

**(See Rule 12)**

**NOTICE**

It is hereby notified that the undersigned has changed his name from **HANUMAPPA RAMAPPA TALWAR** to **HANUMANTHAPPA RAMAPPA CHITHAPUR**

PD-123 **HANUMANTHAPPA RAMAPPA CHITHAPUR**

**FORM - 1**

**(See Rule 9)**

**DEPARTMENT OF POLICE**

**Office of the Director General & Inspector General of Police, Karnataka State, Bangalore-1**

**NOTIFICATION Dated: 17th November 2005**

**Sri N. MUNIYA,** Working as A Police Constable, No.274, Gundlupete Police Station, Chamarajanagar District is permitted to Change his Name to **Sri. N. SURESH YADAV, S/o LATE NARASIMHAIAH.**

**S.M. BIDARI**

PD. 124 A.D.G.P., Administration, D.G.& I.G.P. Office, Bangalore.

**ತೋಟಗಾರಿಕೆ ಇಲಾಖೆ**

**ವಿಶೇಷ ಅಧಿಕಾರಿಗಳ ಕಛೇರಿ, ತೋಟಗಾರಿಕೆ ಇಲಾಖೆ, ನಂದಿಗಿರಿಧಾಮ, ಚಿಕ್ಕಬಳ್ಳಾಪುರ ತಾಲ್ಲೂಕು**

**ಸಂಖ್ಯೆ: ತೋಇ/ವಿಅ/ನಂದಿಗಿರಿ/ವಿನಿ1/38/2005-06, ದಿನಾಂಕ: 24ನೇ ನವೆಂಬರ್ 2005**

**ಟೆಂಡರ್ ಯಾ ಬಹಿರಂಗ ಹರಾಜು ಪ್ರಕಟಣೆ**

ಕೋಲಾರ ಜಿಲ್ಲೆ ಚಿಕ್ಕಬಳ್ಳಾಪುರ ತಾಲ್ಲೂಕು ನಂದಿಗಿರಿಧಾಮದಲ್ಲಿರುವ ಈ ಇಲಾಖಾಧೀನದ ಸ್ನಾಂಕಿ ಬಿಲ್ಡಿಂಗ್‌ನಲ್ಲಿರುವ ಒಂದು ಚಿಲ್ಲರೆ ಅಂಗಡಿ ಮತ್ತು ಗಿರಿಧಾಮದ ಬಸ್ ನಿಲ್ದಾಣದಲ್ಲಿರುವ ಮತ್ತೊಂದು ಚಿಲ್ಲರೆ ಅಂಗಡಿಯನ್ನು ದಿನಾಂಕ: 01.02.2006 ರಿಂದ 31.01.2007 ರವರೆಗೆ ಒಂದು ವರ್ಷದ ಅವಧಿಗೆ ಸಾರ್ವಜನಿಕರ ಮೂಲಕ ನಡೆಸಲು ಉದ್ದೇಶಿಸಲಾಗಿದೆ. ನಿಗದಿತ ಟೆಂಡರ್ ಫಾರಂಗಳನ್ನು ದಿನಾಂಕ: 3.1.2006 ರಂದು ಸಂಜೆ 5.00 ಗಂಟೆಯೊಳಗೆ ಕಛೇರಿ ಕೆಲಸದ ಅವಧಿಯಲ್ಲಿ ರೂ.100-00 ಗಳನ್ನು ಸಂದಾಯಿಸಿ ಪಡೆಯಬಹುದಾಗಿದೆ. ಟೆಂಡರ್ ಸಲ್ಲಿಸಲು ಇಚ್ಛಿಸುವವರು ಟೆಂಡರ್‌ಗಳನ್ನು ಸೀಲ್ಡ್ ಮಾಡಿದ ಲಕೋಟೆಯಲ್ಲಿಟ್ಟು, ನಂದಿಗಿರಿಧಾಮದ ಶ್ರೀ ಯೋಗ ನಂದೀಶ್ವರ ಸ್ವಾಮಿ ದೇವಸ್ಥಾನದ ಪಕ್ಕದ ಚಿಲ್ಲರೆ ಅಂಗಡಿಗಾಗಿ ಅಥವಾ ಗಿರಿಧಾಮದ ಬಸ್ ನಿಲ್ದಾಣದಲ್ಲಿನ ಚಿಲ್ಲರೆ ಅಂಗಡಿಗಾಗಿ ಟೆಂಡರ್ ಎಂದು ಸ್ಪಷ್ಟವಾಗಿ ಬರೆದು ದಿನಾಂಕ: 3.1.2006 ರಂದು ಸಂಜೆ 5.00ರ ಒಳಗೆ ಈ ಕಛೇರಿಗೆ ಸಲ್ಲಿಸತಕ್ಕದ್ದು. ಬಹಿರಂಗ ಹರಾಜನ್ನು ದಿನಾಂಕ: 4.01.2006 ರಂದು ಸಂಜೆ 3 ಗಂಟೆಗೆ ತೋಟಗಾರಿಕೆ ನಿರ್ದೇಶನಾಲಯದ ಕ್ಷೇತ್ರ ವಾರ್ತಾ ಪ್ರಚಾರ ಸಭಾಂಗಣ, ಲಾಲ್‌ಬಾಗ್, ಬೆಂಗಳೂರು ರಲ್ಲಿ ವ್ಯವಸ್ಥೆ ಮಾಡಲಾಗಿದೆ. ಆಸಕ್ತಿಯುಳ್ಳವರು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಟೆಂಡರ್‌ನ್ನಲ್ಲಾಗಲಿ, ಬಹಿರಂಗ ಹರಾಜುವಿನ್ನಲ್ಲಾಗಲಿ ಭಾಗವಹಿಸಬಹುದು.

**ನಿಬಂಧನೆಗಳು**

1) ಪ್ರತಿಯೊಂದು ಚಿಲ್ಲರೆ ಅಂಗಡಿಯ ಟೆಂಡರ್‌ನಲ್ಲಿ ಭಾಗವಹಿಸುವ ಬಿಡ್ಡುದಾರರು ಟೆಂಡರ್ ನೊಂದಿಗೆ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ವಿಶೇಷ ಅಧಿಕಾರಿ ನಂದಿಗಿರಿಧಾಮ ಇವರ ಹೆಸರಿಗೆ ಪಡೆದ ರೂ.10,000/- ಡಿ.ಡಿ. ಯನ್ನು ಲಗತ್ತಿಸಿ ಸಲ್ಲಿಸಬೇಕು. ಹಾಗೂ

ಟೆಂಡರ್‌ನಲ್ಲಿ ಸೂಚಿಸಿರುವ ಮೊತ್ತದ ಶೇ.50 ರಷ್ಟಕ್ಕೆ ಡಿ.ಡಿ. ಯನ್ನು ಈ ಕೆಳ ಸಹಿದಾರರ ಹೆಸರಿಗೆ ಪಡೆದು ಲಗತ್ತಿಸಿರಬೇಕು. ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬ ಬಿಡ್ಡುದಾರರು ಹರಾಜು ದಿನ ಸಂದರ್ಭದಲ್ಲಿ ರೂ.10,000/- ನಗದು ಹಣ ಠೇವಣಿ ಇಡಬೇಕು.

2) ಬಹಿರಂಗ ಹರಾಜು ಮುಗಿದ ನಂತರ ನಿಗದಿತ ಅವಧಿಯೊಳಗೆ ಈ ಕಛೇರಿಗೆ ತಲುಪಿದ್ದ ಸೀಲ್ಡ್ ಟೆಂಡರ್‌ಗಳನ್ನು ಬಿಡ್ಡುದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಬಹಿರಂಗ ಹರಾಜಿನ ಅಂತಿಮ ಮೊತ್ತ ಅಥವಾ ಟೆಂಡರ್‌ನಲ್ಲಿ ನಮೂದಿಸಿರುವ ಮೊತ್ತಗಳೆರಡರ ಪೈಕಿ ಯಾವುದು ಹೆಚ್ಚಿನದಾಗಿ ಸರ್ಕಾರಕ್ಕೆ ಆದಾಯ ಬರುತ್ತದೆಯೋ ಅದನ್ನು ಪರಿಗಣಿಸಲಾಗುವುದು. ಅನುಮೋದಿಸಿದ ಬಿಡ್ಡಿನ ಶೇ.50 ಭಾಗದ ಹಣವನ್ನು ಹರಾಜು ಮುಗಿದತಕ್ಷಣ ಹರಾಜು ಸ್ಥಳದಲ್ಲಿಯೇ ಪಾವತಿ ಮಾಡಬೇಕು. ತಪ್ಪಿದಲ್ಲಿ ಠೇವಣಿ ಹಣ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಕಾನೂನು ಕ್ರಮ ಜರುಗಿಸಲಾಗುವುದು, ಉಳಿದ ಶೇ.50 ಭಾಗದ ಹಣವನ್ನು ಹರಾಜು ಯಾ ಟೆಂಡರ್‌ನ್ನು ತೋಟಗಾರಿಕೆ ನಿರ್ದೇಶಕರು ಅನುಮೋದನೆ ನೀಡಿದ ಕೂಡಲೇ ಅಂಗಡಿಯನ್ನು ಬಿಡ್ಡುದಾರರು ತಮ್ಮ ವಶಕ್ಕೆ ಪಡೆಯುವ ಮೊದಲು ಉಳಿದ ಶೇ.50 ಭಾಗದ ಹಣವನ್ನು ಪಾವತಿ ಮಾಡಬೇಕು. ಇಲ್ಲದಿದ್ದರೆ ಠೇವಣಿ ಹಣ ಮತ್ತು ಶೇ.50 ಭಾಗದ ಹಣ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

3) ಟೆಂಡರ್ ಸಲ್ಲಿಸಲು ಅಥವಾ ಹರಾಜಿನಲ್ಲಿ ಭಾಗವಹಿಸಲು ಕಟ್ಟಿದ ಠೇವಣಿ ಹಣವನ್ನು ಹರಾಜು ಮುಗಿದಾಕ್ಷಣ ಯಶಸ್ವಿ ಬಿಡ್ಡುದಾರರನ್ನು ಬಿಟ್ಟು ಉಳಿದವರಿಗೆ ಮರು ಸಂದಾಯ ಮಾಡಲಾಗುವುದು. ಹಾಗೂ ಯಶಸ್ವಿ ಬಿಡ್ಡುದಾರರು ಸರ್ಕಾರಕ್ಕೆ ಸಂದಾಯ ಮಾಡಿದ ಟೆಂಡರಿನ ಅಥವಾ ಹರಾಜಿನ ಹಣವನ್ನು ಚಿಲ್ಲರೆ ಅಂಗಡಿಗಳು ನಡೆಸಲಿ, ನಡೆಸದೆ ಇರಲಿ, ಹಣ ವಾಪಸ್ ಮಾಡಲಾಗುವುದಿಲ್ಲ. ಅಲ್ಲದೆ ಯಶಸ್ವಿ ಬಿಡ್ಡುದಾರರು ಅಂಗಡಿಗೆ ಸಂಬಂಧಿಸಿದ ವಿದ್ಯುಚ್ಛಕ್ತಿ ಬಿಲ್ಲುಗಳನ್ನು ಭರಿಸಬೇಕು, ಮತ್ತು ಸರ್ಕಾರಿ ನಿಯಮಾನುಸಾರ ಅನ್ವಯವಾಗುವ ಯಾವುದೇ ಸ್ಥಳೀಯ ತೆರಿಗೆಗಳು ಕಟ್ಟಲು ಬದ್ಧರಾಗಿರಬೇಕು.

4) ಅಂಗಡಿಯಲ್ಲಿ ಕಾಫಿ, ಟೀ ಮತ್ತು ಐಸ್ ಕ್ರೀಂಗಳನ್ನು ಮಾರಾಟ ಮಾಡಬಾರದು ಮತ್ತು ಅಂಗಡಿಯ ಮಾರಾಟ ಸಾಮಗ್ರಿಗಳನ್ನು ಹಾಗೂ ಅಂಗಡಿ ಸಾಮಗ್ರಿಗಳನ್ನು ವಿಶೇಷ ಅಧಿಕಾರಿಗಳು ಸೂಚಿಸುವ ಆವರಣದಲ್ಲಿ ಮಾತ್ರ ಇರಿಸಿ ವ್ಯಾಪಾರ ಮಾಡಬೇಕು. ಆವರಣವನ್ನು ಬಿಟ್ಟು ಇತರೆ ಸ್ಥಳಗಳಲ್ಲಿ ಅಂಗಡಿಯ ವಸ್ತುಗಳು ಮಾರಾಟ ಮಾಡಿದ್ದಲ್ಲಿ ಕಾನೂನು ಮತ್ತು ನಿಯಮಾವಳಿಗಳಂತೆ ಕ್ರಮ ಜರುಗಿಸಲಾಗುವುದು.

5) ಈ ಅಂಗಡಿಗಳ ಹರಾಜಿನ ದಿನಾಂಕ: 1.02.2006 ರಿಂದ 31.01.2007 ಆಗಿದ್ದರೂ ಸರ್ಕಾರದ ಮತ್ತು ಸಾರ್ವಜನಿಕ ಹಿತ ದೃಷ್ಟಿಯಿಂದ ಹರಾಜಿನ ಅವಧಿಯನ್ನು ಮೊಟಕುಗೊಳಿಸುವ ಅಧಿಕಾರವನ್ನು ತೋಟಗಾರಿಕೆ ಇಲಾಖೆ ನಿರ್ದೇಶಕರು ಹೊಂದಿರುತ್ತಾರೆ. ಈ ಸಂದರ್ಭದಲ್ಲಿ ಹರಾಜಿನ ಮೊತ್ತವನ್ನು 365 ದಿವಸಗಳಲ್ಲಿ ವಿಭಜಿಸಿ ಬಳಕೆ ದಿನಗಳ ಮೊತ್ತ ಬಿಟ್ಟು ಉಳಿದ ಅಸಲು ಮಾತ್ರ ಹಿಂದಿರುಗಿಸುವ ಕ್ರಮ ವಹಿಸಲಾಗುವುದು, ಇದಕ್ಕೆ ಬಿಡ್ಡುದಾರರು ಬದ್ಧರಿರಬೇಕು.

6) ಯಶಸ್ವಿ ಬಿಡ್ಡುದಾರರ ಮೊತ್ತವನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಲ್ಲಿ ಕಾಯ್ದಿರಿಸಿದೆ ಮತ್ತು ಟೆಂಡರ್-ಯಾ-ಬಹಿರಂಗ ಹರಾಜುವಿನ ಅಂತಿಮ ತೀರ್ಮಾನ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಲ್ಲಿ ಕಾಯ್ದಿರಿಸಿದೆ.

7) ಯಶಸ್ವಿ ಬಿಡ್ಡುದಾರರು ತಮ್ಮ ಪರವಾಗಿ ಬೇರೆಯವರಿಂದ ಅಂಗಡಿ ನಡೆಸುವುದನ್ನು ಮತ್ತು ಅಂಗಡಿ ಪದಾರ್ಥಗಳನ್ನು ಬೇರೆಯವರ ಮೂಲಕ ಉಪ ಗುತ್ತಿಗೆ ಅಥವಾ ಇನ್ನಾವುದೇ ಕ್ರಮದ ಮೂಲಕ ಮಾರಾಟ ಮಾಡುವುದನ್ನು ನಿಷೇದಿಸಿದೆ. ಹಾಗೆಯೇ ಶಬ್ದ ಮಾಲಿನ್ಯ ಉಂಟಾಗುವಂತಹ ಟೇಪ್‌ರೆಕಾರ್ಡರ್ಸ್ ಮತ್ತು ಧ್ವನಿ ವರ್ದಕಗಳ ಬಳಕೆ ಸಹ ನಿಷೇಧಿಸಲಾಗಿದೆ.

8) ಯಶಸ್ವಿ ಬಿಡ್ಡುದಾರರು ಟೆಂಡರ್-ಯಾ-ಬಹಿರಂಗ ಹರಾಜುವಿನಲ್ಲಿಟ್ಟ ಠೇವಣಿ ಹಣ ರೂ.10,000/- ವನ್ನು ಬಡ್ಡಿ ರಹಿತ ಟೆಂಡರ್-ಯಾ-ಹರಾಜು ಅವಧಿ ನಂತರ ಅಂಗಡಿಯನ್ನು ಸುಸ್ಥಿತಿಯಲ್ಲಿ ವಿದ್ಯುಚ್ಛಕ್ತಿ ಬಿಲ್ಲುಗಳು ಯಾವುದೇ ಬಾಕಿಯಿಲ್ಲದ್ದಂತೆ ತೀರ್ಣಗೊಳಿಸಿದ್ದರೆ ಮಾತ್ರ ಹಿಂದಿರುಗಿಸಲಾಗುವುದು. ಸರ್ಕಾರದ ಆಸ್ತಿಗೆ ಧಕ್ಕೆ ಅಥವಾ ಬಾಕಿ ಸಂದರ್ಭದಲ್ಲಿ ಸದರಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಯಶಸ್ವಿ ಬಿಡ್ಡುದಾರರು ಮೇಲಿನ ಎಲ್ಲಾ ಷರತ್ತುಗಳನ್ನು ಒಪ್ಪಿ ಅಂಗಡಿಯನ್ನು ಪಡೆಯುವ ಮೊದಲು ರೂ.100 ಛಾಪಾ ಕಾಗದದಲ್ಲಿ ನೋಟರಿಯವರೆದುರು ಇಲಾಖೆಗೆ ಕರಾರು ಪತ್ರ ಬರೆದು ಕೊಡಬೇಕು.

9) ಈ ಟೆಂಡರ್-ಯಾ-ಬಹಿರಂಗ ಹರಾಜು ವಿಷಯದಲ್ಲಿ ಉದ್ಭವವಾಗುವ ಯಾವುದೇ ತರಹವಾದ ತಂಟೆ ತಕರಾರುಗಳನ್ನು ತೀರ್ಣಗೊಳಿಸುವ ಅಧಿಕಾರ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರು ಹೊಂದಿದ್ದು ಈ ಹರಾಜಿನಲ್ಲಿ ಭಾಗವಹಿಸುವವರು ಇದಕ್ಕೆ ಬದ್ಧರಾಗಿರಬೇಕು.

ವಿಶೇಷ ಅಧಿಕಾರಿ,
ತೋಟಗಾರಿಕೆ ಇಲಾಖೆ, ನಂದಿಗಿರಿಧಾಮ.

ಪಿ.ಆರ್. 652

**ವಿಮಾ ನಿರ್ದೇಶನಾಲಯ, 17ನೇ ಮಹಡಿ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಡಾ. ಅಂಬೇಡ್ಕರ್ ವೀದಿ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ವಿನಿ/ಸಿಶಾ/ಬ್ಯಾಲಾ/1688/2005-06, ದಿನಾಂಕ: 28ನೇ ನವೆಂಬರ್ 2005**

**ವಿಷಯ:** ನೇರ ನೇಮಕಾತಿ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್.13.ಎಸ್‌ಟಿಸಿ.2001, ದಿನಾಂಕ: 21.11.2001.

ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯಲ್ಲಿ ಈ ಕೆಳಕಂಡ ವೃಂದದಲ್ಲಿ ನೇರ ನೇಮಕಾತಿ ಬ್ಯಾಕ್‌ಲಾಗ್ ಹುದ್ದೆಗಳಿಗಾಗಿ ಸರ್ಕಾರದ ದಿನಾಂಕ: 21.11.2001ರ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಟಿಸಿ 2001 ರಲ್ಲಿ ಪ್ರಕಟಿಸಿರುವ ನಿಯಮಗಳ ಪ್ರಕಾರ ನೇರ ನೇಮಕಾತಿ ಮಾಡಲು ಅರ್ಹ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಮಾತ್ರ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ವಿವರಗಳು ಈ ಕೆಳಕಂಡಂತಿವೆ.

| ಕ್ರ. ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ಮೀಸಲಾತಿ ವರ್ಗ | ಅರ್ಹತಾ ಶ್ರೇಷ್ಠತೆ (ಜಿ.ಎಂ.) | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಒಟ್ಟು |
|---|---|---|---|---|---|---|
| 1 | ಪ್ರಥಮ ದರ್ಜೆ ಸಹಾಯಕರು<br>ವೇತನ ಶ್ರೇಣಿ ರೂ.3850-7050 | ಪ.ಜಾ. | 1 | 1 | - | 2 |
| 2 | ದ್ವಿತೀಯ ದರ್ಜೆ ಸಹಾಯಕರು<br>ವೇತನ ಶ್ರೇಣಿ ರೂ.3000-5450 | ಪ.ಜಾ. | - | - | 1 | 1 |
| | | ಪ.ಪಂ. | 1 | - | - | 1 |

**ಕನಿಷ್ಠ ವಿದ್ಯಾರ್ಹತೆ:-**

| | | |
|---|---|---|
| 1 | ಪ್ರಥಮ ದರ್ಜೆ ಸಹಾಯಕರು | ಯಾವುದೇ ಪದವಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು |
| 2 | ದ್ವಿತೀಯ ದರ್ಜೆ ಸಹಾಯಕರು | ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು. |

**ವಯೋಮಿತಿ:-**

ಮೇಲಿನ ಹುದ್ದೆಗಳಿಗೆ ಅರ್ಜಿಯನ್ನು ಸಲ್ಲಿಸುವ ದಿನಾಂಕಕ್ಕೆ 18 ವರ್ಷ ತುಂಬಿರಬೇಕು ಮತ್ತು ಗರಿಷ್ಠ ವಯೋಮಿತಿ 40 ವರ್ಷ ಮೀರಿರಬಾರದು.

**ಸಾಮಾನ್ಯ ಷರತ್ತುಗಳು:-**

1. ಅಭ್ಯರ್ಥಿಗಳು ಮುದ್ರಿತವಾದ ಅರ್ಜಿ ನಮೂನೆ-1 ನ್ನು ನಿಗದಿತ ದರ ಪಾವತಿ ಮಾಡಿ ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆ (ಸೆಂಟ್ರಲ್ ಬುಕ್ ಡಿಪೋ), ಇನ್ನಿತರ ಜಿಲ್ಲೆಯ ಸರ್ಕಾರಿ ಮುದ್ರಣಾಲಯದ ಪುಸ್ತಕ ಮಳಿಗೆ, ರಾಜ್ಯದ ಅಂಗೀಕೃತ ಪುಸ್ತಕ ಮಾರಾಟಗಾರರ ಹಾಗೂ ಸರ್ಕಾರ ಅಂಗೀಕೃತ ಪುಸ್ತಕ ಮಳಿಗೆಯಿಂದ ಖರೀದಿಸಿ ಭರ್ತಿ ಮಾಡಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2. ಅಭ್ಯರ್ಥಿಗಳು ಬೇರೆ ಬೇರೆ ಹುದ್ದೆಗಳಿಗೆ ಪ್ರತ್ಯೇಕವಾಗಿ ದ್ವಿಪ್ರತಿಯಲ್ಲಿ ಅರ್ಜಿ ಸಲ್ಲಿಸಬೇಕು.
3. ಅಭ್ಯರ್ಥಿಗಳು ನಿಯಮಾವಳಿಯನುಸಾರ ಸಕ್ಷಮ ಪ್ರಾಧಿಕಾರದಿಂದ ಪಡೆದ ಜಾತಿ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ಮಾತ್ರ ಅರ್ಜಿಗೆ ಲಗತ್ತಿಸಬೇಕು.
4. ಜನ್ಮ ದಿನಾಂಕಕ್ಕೆ ಮತ್ತು ವಿದ್ಯಾರ್ಹತೆಗೆ ಸಂಬಂಧಿಸಿದ ಪ್ರಮಾಣ ಪತ್ರಗಳ ಪ್ರತಿಯನ್ನು ಸ್ವಯಂ ದೃಢೀಕರಿಸಿ ಲಗತ್ತಿಸಬೇಕು (ಜನ್ಮ ದಿನಾಂಕ: ಇರುವ ಎಸ್.ಎಸ್.ಎಲ್.ಸಿ., ಟಿ.ಸಿ., ಕ್ಯುಮ್ಯುಲೇಟಿವ್ ರೆಕಾರ್ಡ್ ಇವುಗಳ ಪ್ರತಿ).
5. ಗ್ರಾಮೀಣ ಅಭ್ಯರ್ಥಿಗಳು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರು ನಿಗದಿತ ನಮೂನೆಯಲ್ಲಿ (2 ಜೆರಾಕ್ಸ್ ಪ್ರತಿಗಳನ್ನು) ನೀಡಿರುವ ಪ್ರಮಾಣ ಪತ್ರವನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿದ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಗ್ರಾಮೀಣ ಅಭ್ಯರ್ಥಿಯೆಂದರೆ ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ., ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕರ್ನಾಟಕ ಪೌರ ನಿಗಮಗಳ ಅಧಿನಿಯಮದ 1976ರ ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964 ರಡಿಯಲ್ಲಿ ನಿರ್ದಿಷ್ಟಪಡಿಸಿರುವ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶಗಳ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿ.
6. ಅಭ್ಯರ್ಥಿಗಳು ಇಬ್ಬರು ಗಣ್ಯ ವ್ಯಕ್ತಿಗಳಿಂದ ಗುಣ ಮತ್ತು ನಡತೆಯ ಬಗ್ಗೆ ಪ್ರಮಾಣ ಪತ್ರ ಪಡೆದು ಲಗತ್ತಿಸಬೇಕು.
7. ಈಗಾಗಲೇ ಸರ್ಕಾರಿ / ಅರೆ ಸರ್ಕಾರಿ / ನಿಗಮ ಇತ್ಯಾದಿ ಸಂಸ್ಥೆಗಳಲ್ಲಿ ಸೇವೆಯಲ್ಲಿರುವ ಅಭ್ಯರ್ಥಿಗಳು ಇಲಾಖಾ ಪ್ರಾಧಿಕಾರಿಗಳ ಮುಖಾಂತರ ಅರ್ಜಿಗಳನ್ನು ಸಲ್ಲಿಸಬೇಕು.
8. ಈ ಅಧಿಸೂಚನೆಗೆ ಅನುಗುಣವಾಗಿ ಅಭ್ಯರ್ಥಿಯು ಆಯ್ಕೆಯಾದರೆ ಅಂತಹವರು ಕರ್ನಾಟಕ ರಾಜ್ಯದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸಲು ಬದ್ಧರಾಗಿರಬೇಕು.
9. ಮೇಲಿನ ಅಧಿಸೂಚನೆಯಲ್ಲಿನ ಯಾವುದೇ ನಿರ್ದಿಷ್ಟ ವರ್ಗದಲ್ಲಿ ಆಯ್ಕೆ ಬಯಸಿದಂತಹ ಅಭ್ಯರ್ಥಿಗಳು ಅದಕ್ಕೆ ಸಂಬಂಧಿಸಿದ ಪೂರಕ ದಾಖಲೆಗಳ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.
10. ಭರ್ತಿ ಮಾಡಿದ ಅರ್ಜಿಯನ್ನು ಸೂಕ್ತ ಅಡಕಗಳೊಂದಿಗೆ "ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, 17ನೇ ಮಹಡಿ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು-1" ಇವರ ವಿಳಾಸಕ್ಕೆ ಲಕೋಟೆಯ ಮೇಲೆ "ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಹುದ್ದೆಗೆ ಅರ್ಜಿ" ಎಂಬುದಾಗಿ ನಮೂದಿಸಿ ದಿನಾಂಕ: 31.12.2005ರ ಸಂಜೆ 4.30 ರೊಳಗೆ ತಲುಪುವಂತೆ ಕಳುಹಿಸತಕ್ಕದ್ದು. ನಿಗದಿತ ದಿನಾಂಕದ ನಂತರ ತಲುಪಿದ ಅರ್ಜಿಯನ್ನು ಮತ್ತು ಅಸಮರ್ಪಕ ಹಾಗೂ ಅಪೂರ್ಣ ಅರ್ಜಿಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸಲಾಗುವುದು.

ನಿರ್ದೇಶಕರು,
ವಿಮಾ ಇಲಾಖೆ.

ಪಿ.ಆರ್. 657

**ನಮೂನೆ 1**

**(9ನೇ ನಿಯಮ ನೋಡಿ)**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು**

**ಅಧಿಸೂಚನೆ ದಿನಾಂಕ: 19ನೇ ನವೆಂಬರ್ 2005**

ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಹಾವೇರಿ, ಇಲ್ಲಿ ಶೀಘ್ರಲಿಪಿಗಾರರಾಗಿ ಕೆಲಸ ನಿರ್ವಹಿಸುತ್ತಿರುವ **ಶ್ರೀಮತಿ ರೇಣುಕಾ ಎಸ್. ಮಾದರ** ಇವರಿಗೆ, **ಶ್ರೀಮತಿ ಎಂ.ಎಸ್. ರೇಣುಕಾ** ಎಂದು ಹೆಸರು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

ಪಿ.ಡಿ. 122